

ಕಾಯಕವೇ ಕೈಲಾಸ

# ಸಿದ್ಧಗಂಗಾ

ಸಂಪುಟ : ೪೮ ಜನವರಿ ೨೦೧೨ ಸಂಚಿಕೆ : ೦೧

**ಸಂಕ್ರಮಣ ಸಂಚಿಕೆ**



ಸಂಕ್ರಾಂತಿ ಹಬ್ಬದ
ಹಾರ್ದಿಕ ಶುಭಾಶಯಗಳು





ಲಿಂ. ಶ್ರೀ ಅಟವೀ ಸ್ವಾಮಿಗಳು



ಲಿಂ. ಶ್ರೀ ಉದ್ದಾನ ಶಿವಯೋಗಿಗಳು

ಮನುಷ್ಯ ಹೇಡಿಯಾಗಬಾರದು, ಆತ್ಮವಿಶ್ವಾಸವುಳ್ಳವನಾಗಬೇಕು. ಒಂದಕ್ಕೆ ಹತ್ತು ಮಾಡುತ್ತೇನೆ ಎಂಬ ನಿಷ್ಠೆ ಇರಬೇಕು ಎನ್ನುತ್ತಿದ್ದರು ನಮ್ಮ ಪೂಜ್ಯ ಗುರುಗಳು (ಶ್ರೀ ಉದ್ದಾನ ಶಿವಯೋಗಿಗಳು). ಗುರುಗಳ ಭೌತಿಕ ಕಾಯ ಇಂದು ನಮ್ಮ ಮುಂದಿಲ್ಲ ನಿಜ. ಆದರೆ ಅವರ ಜ್ಯೋತಿ ಕಾರ್ಯದ ತೇಜಸ್ಸು ಚಿರಂತನವಾಗಿ ಶ್ರೀಮಠದಲ್ಲಿ ಸುಳಿದಾಡುತ್ತಿದೆ. ಇದು ಶರಣರ ತಪೋಭೂಮಿ. ನಮ್ಮ ಗುರುಗಳು ಅಖಂಡ ತಪೋನಿಷ್ಠರು, ತ್ರಿಕಾಲಜ್ಞಾನಿಗಳು. "ತಮಂಥದ ಕೇಡಿ"ಗಾಗಿ ನಮ್ಮ ಗುರುಗಳು ಶ್ರಮಿಸಿದ್ದು ಅಪಾರ. ದಿಟ್ಟ ಹೆಜ್ಜೆ-ಧೀರ ನಿಲವು ಪೂಜ್ಯ ಶ್ರೀಗಳದ್ದು. ಪ್ರಚಾರ ಪ್ರಿಯರಲ್ಲ. ಪ್ರವಾದಿಗಳು. ಪವಾಡ ಪುರುಷರು, ಪುರುಣ ಪುಣ್ಯಮೂರ್ತಿಗಳು. ಶ್ರೀಮಠದ ಕಾರಣಿಕರ ದೀಪವಾದ ವಿಭೂತಿಪುರುಷರು.

– ಶ್ರೀವಾಣಿ

ಸಂಪಾದಕ :
ಹೆಚ್.ವಿ. ವೀರಭದ್ರಯ್ಯ

ಸಹ ಸಂಪಾದಕ :
ಎಚ್.ಎಸ್. ಸಿದ್ಧಗಂಗಪ್ಪ

ಸಂಚಾಲಕ :
ಎಂ. ರೇಣುಕಾರಾಧ್ಯ

ಪ್ರಕಾಶಕರು:
ಹೆಚ್.ಬಿ. ಗಂಗಾಧರಯ್ಯ
ಹಳೆಯ ವಿದ್ಯಾರ್ಥಿಗಳ ಸಂಘ,
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ -572 104.

ಮುದ್ರಕರು:
ಶ್ರೀ ಸಿದ್ಧಲಿಂಗೇಶ್ವರಸ್ವಾಮಿ
ಆಫ್‌ಸೆಟ್ ಮುದ್ರಣಾಲಯ,
ಶ್ರೀ ಸಿದ್ಧಗಂಗಾ ಮಠ,
ತುಮಕೂರು -572 104.

ವಿಳಾಸ :
"ಸಂಪಾದಕರು"
'ಸಿದ್ಧಗಂಗಾ' ಮಾಸಪತ್ರಿಕೆ
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ -೫೭೨ ೧೦೪

ಲೇಖಕರ ಅಭಿಪ್ರಾಯಗಳು
ಪತ್ರಿಕೆಯ ಅಭಿಪ್ರಾಯಗಳಲ್ಲ



॥ ಓಂ ಶ್ರೀ ಗುರುಬಸವಲಿಂಗಾಯ ನಮಃ ॥

ಆವಾವ ಕಾಯಕವ ಮಾಡಿದರು ಬಸವೇಶ
ಆವಗಂ ಶರಣರನು ಸೇವಿಪೆನು ಬಸವೇಶ

# ಸಿದ್ಧಗಂಗಾ

ಸಂಪುಟ : ೪೮ ಜನವರಿ ೨೦೧೨ ಸಂಚಿಕೆ : ೧

## ಒಳಪುಟಗಳಲ್ಲಿ ..................



ಚಂದಾ ವಿವರ : ವಾರ್ಷಿಕ ಚಂದಾ ರೂ. ೧೨೦/-
ಆಜೀವ ಸದಸ್ಯತ್ವ ರೂ. ೧೦೦೦/- ಬಿಡಿ ಪ್ರತಿ ರೂ. ೧೦.೦೦

## ಕಾಲನಿಯತಿ

**ಆತ್ಮೀಯರೇ,**

**ಹೊಸವರ್ಷದ ಶುಭಾಶಯಗಳು,**

ಕಾಲ ನಿಯತಿ ನಿಯಮವನ್ನು ಚಾಚೂ ತಪ್ಪದೆ ಅನುಸರಿಸುವಂಥದ್ದು. ಅದು ಯಾರನ್ನೂ ಕಾಯುವುದಿಲ್ಲ. ಆರಕ್ಕೆ ಹಿಗ್ಗುವುದಿಲ್ಲ. ಮೂರಕ್ಕೆ ಕುಗ್ಗುವುದಿಲ್ಲ. ಸಿರಿಬರಲಿ ಉರಿಬರಲಿ ಬೇಕು ಬೇಕೆನ್ನದೆ ಮುಂದುವರಿಯುತ್ತಿರುವುದೇ ಅದರ ಧರ್ಮ.

2011 ಮುಗಿಯಿತು. ಇನ್ನೆಂದೂ ತಿರುಗಿ ಬರುವುದಿಲ್ಲ. 2012 ಬಂದಿದೆ. ಮುಂದು ದೃಷ್ಟಿಯಿಂದ ಹೆಜ್ಜೆ ಹಾಕುತ್ತದೆ. ಅದೂ ಕೂಡ ಯಾರ ಮರ್ಜಿಗೂ ಒಳಗಾಗದು. ಕಾಲ ಮತ್ತು ಲೋಕಗಳು ನ್ಯಾಯನಿಷ್ಠುರಿಗಳು. ಕಂಡದ್ದನ್ನು ಕಂಡಂತೆ ತೆರೆದಿಡುವ ನಿಷ್ಪಕ್ಷಪಾತಿಗಳು.

ಕಳೆದ ವರ್ಷ ಆಗಿಹೋದ ಘಟನೆಗಳತ್ತ ಕಣ್ಣು ಹೊರಳಿಸಿದಾಗ ಏನೆಲ್ಲವನ್ನೂ ಕಂಡಂತಾಯಿತು. ರಾಷ್ಟ್ರ, ರಾಜ್ಯ ಜೀವನದಲ್ಲಿ ಬದಲಾವಣೆಗಳಾದವು. ಹಗರಣಗಳ ಸರಣಿಯೇ ಕಣ್ಮುಂದೆ ನಿಲ್ಲುತ್ತದೆ. ಸ್ಪೆಕ್ಟ್ರಂ ಹಗರಣ, ಭೂ ಕಬಳಿಕೆ ಹಗರಣ, ಭ್ರಷ್ಟಾಚಾರದ ಅಬ್ಬರ, ಜೈಲುವಾಸ, ಆರೋಪ ಪ್ರತ್ಯಾರೋಪಗಳ ಗೌಜು ಗದ್ದಲ, ಎಗ್ಗುಸಿಗ್ಗಿಲ್ಲದ ಸಮರ್ಥನೆಗಳ ಸದ್ದು ಸಡಗರ, ಯಾರು ಪ್ರಾಮಾಣಿಕರು? ಎಂಬ ಪ್ರಶ್ನೆ, ಸಚಿವರೇ? ಶಾಸಕರೇ? ಅಧಿಕಾರಿಗಳೇ? ಲೋಕಾಯುಕ್ತರ ಬಿಡುಗಣ್ಣಿಗೆ ಬೀಳದವರಾರು? ಬಿದ್ದರೂ ಬಿದ್ದಿಲ್ಲವೆಂಬ ತಕರಾರುಗಳು ಕೇಳಿ ಬಂದವು. ಆರೋಪ, ಅಪರಾಧಗಳ ವಿಮರ್ಶೆಗಳು ಬೇರೆ. ಎಲ್ಲವನ್ನು ಸುಮ್ಮನೆ ಸಹಿಸಿಕೊಂಡು ಹೋಗುತ್ತಿರುವ ಶ್ರೀಸಾಮಾನ್ಯನ ಅಸಾಧಾರಣ ತಾಳ್ಮೆ. ಈ ಎಲ್ಲವನ್ನು 2011 ಕೊಟ್ಟು ಹೋಯಿತು.

2012 ಇನ್ನು ಕೊಡಲಿರುವುದೇನು? ಕಾದು ನೋಡಬೇಕಾಗಿದೆ.

ಶ್ರೀಮಠದಲ್ಲಿ ನಡೆದ ಮಹತ್ವದ ಘಟನೆಯೆಂದರೆ 104ನೇ ವರ್ಷವನ್ನು ಮುಗಿಸುತ್ತಿರುವ ಪರಮಪೂಜ್ಯ ಶ್ರೀ ಶ್ರೀಗಳವರು ಕಳೆದ 2011 ಆಗಸ್ಟ್ 4ರಂದು ಪೂಜ್ಯರಾದ ಶ್ರೀ ಶ್ರೀ ಸಿದ್ಧಲಿಂಗಮಹಾಸ್ವಾಮಿಗಳವರಿಗೆ ಶ್ರೀಮಠದ ಅಧಿಕಾರವನ್ನು ಹಸ್ತಾಂತರಿಸಿದ್ದಾಗಿದೆ. 82 ವರ್ಷಗಳ ಸುದೀರ್ಘ ಕಾಲ ಸಂಸ್ಥೆಯನ್ನು ಅಭೂತಪೂರ್ವವಾಗಿ ಕಟ್ಟಿ ತಮ್ಮ ಉತ್ತರಾಧಿಕಾರಿಗಳಿಗೆ ಜವಾಬ್ದಾರಿಯನ್ನು ವಿಧಿವತ್ತಾಗಿ ನೀಡಿ ಆಶೀರ್ವದಿಸಿದ್ದಾಗಿದೆ.

'ಸಿದ್ಧಗಂಗಾ' ಮಾಸಪತ್ರಿಕೆ ಶ್ರೀಮಠದ ಮುಖವಾಣಿ, ಅದು ನಿಮ್ಮದು, ನೀವು ಅದನ್ನು ಬೆಳೆಸಿಕೊಂಡು ಹೋಗಬೇಕು. ಅದರ ಅಭಿವೃದ್ಧಿ ನಿಮ್ಮದಾಗಬೇಕು. ಆಜೀವ ಸದಸ್ಯರಾಗುವ ಮನಸ್ಸು ನಿಮ್ಮದಾಗಬೇಕು. ನಿಮ್ಮ ನೆರೆಹೊರೆಯವರನ್ನು, ಬಂಧುಗಳನ್ನು, ಸ್ನೇಹಿತರನ್ನು ಚಂದಾದಾರರನ್ನಾಗಿ ಮಾಡಬೇಕು. ನಿಮ್ಮ ಸಹಕಾರ ಪತ್ರಿಕೆಯ ಮುನ್ನಡೆಗೆ ಕಾರಣ. ಅನ್ನವಿಟ್ಟು ಅಕ್ಷರ ಕಲಿಸಿ, ಬಾಳಿಗೊಂದು ಬೆಳಕು ನೀಡಿದ ಶ್ರೀಮಠದ ಅಕ್ಷರ ರೂಪಿಯನ್ನು ಸ್ವಾಗತಿಸುವ ಸುಸ್ನೇಹವನ್ನು ಪತ್ರಿಕೆ ಆಶಿಸುತ್ತದೆ.

ನಮಸ್ಕಾರ

**–ಸಂಪಾದಕ**





## ನೆನಪು



'ಮೈಸೂರಿನ ಅರಮನೆ ಪಂಚಗವಿಮಠದ ಶ್ರೀ ಗೌರಿಶಂಕರಮಹಾಸ್ವಾಮಿಗಳು ಸ್ವಾಮಿಕುಲಕೆ ತಿಲಕಪ್ರಾಯರಾಗಿದ್ದರು. ಅವರ ವಿದ್ವತ್ತು, ಅಖಂಡ ಅಧ್ಯಯನನಿಷ್ಠೆ, ಪ್ರಬುದ್ಧ ವೈಚಾರಿಕತೆ, ಸರಳತೆಯ ಜೊತೆಗೆ ಹಾಸ್ಯ ಪ್ರವೃತ್ತಿ, ನಿಜಕ್ಕೂ ಅವರ ವ್ಯಕ್ತಿತ್ವದ ಮೇರುಗುಣಗಳಾಗಿದ್ದವು. ಅವರ ನೆನಪೇ ಒಂದು ಮಹಾಭಾಗ್ಯ. ಪ್ರವಚನ ಪರಮೇಶ್ವರರೇ ಅವರಾಗಿದ್ದರು. ಕನ್ನಡ, ಸಂಸ್ಕೃತ ಭಾಷೆಗಳ ಮೇಲೆ ಪ್ರಭುತ್ವವಿತ್ತು.

ಒಂದು ಬಾರಿ ಅವರ ಪ್ರವಚನಕ್ಕೆ ಆಗಮಿಸಿದ್ದ ಉದ್ದಾಮರೆಂದು ತಮ್ಮನ್ನು ತಾವು ಭಾವಿಸಿಕೊಂಡಿದ್ದ ಸಂಸ್ಕೃತ ಪಂಡಿತರು ಕೆಲವರು ಶ್ರೀಗಳವರ ಪ್ರವಚನ ಮುಗಿದನಂತರ ತಮ್ಮಲ್ಲಿಯೇ ತಾವು ಮಾತಾಡಿಕೊಂಡ ಪ್ರಸಂಗದ ಮಾತುಗಳು– 'ಶ್ರೀಗಳವರನ್ನು ಸಂಸ್ಕೃತ ವಿದ್ವಾಂಸರೆಂದು ಕರೆಯುತ್ತಿರುವುದು ಕೇವಲ ಪ್ರಶಂಸೆಯ ಮಾತುಗಳಷ್ಟೆ. ಅವರ ಪ್ರವಚನ ಅಷ್ಟೇನೂ ಹೇಳಿಕೊಳ್ಳುವುದಂಥದಲ್ಲ. ಸಂಸ್ಕೃತದಲ್ಲಿ ಪ್ರವಚನ ಮಾಡಲಿ ನಾವು ಒಪ್ಪಿಕೊಳ್ಳುತ್ತೇವೆ' ಎಂದುಕೊಂಡುದು ಶ್ರೀಗಳವರ ಕಿವಿಗೆ ಬಿದ್ದಿತು. ಸರಿ, ಮರುದಿನ ಅಂದುಕೊಂಡಿದ್ದ, ಆಡಿಕೊಂಡಿದ್ದ, ಆ ಸಂಸ್ಕೃತ ಪಂಡಿತರ ಜೊತೆಗೆ ಇನ್ನೂ ಉದ್ಧಾಮರೆನಿಸಿಕೊಂಡಿದ್ದ ಸಂಸ್ಕೃತಾಭಿಮಾನಿಗಳನ್ನು ಆಹ್ವಾನ ನೀಡಿ ಪ್ರವಚನವನ್ನು ಪ್ರಾರಂಭಿಸಿದರು. ಸಂಸ್ಕೃತದಲ್ಲಿ ಪ್ರಾರಂಭವಾದ ಪ್ರವಚನ ಜೋಗದ ಜಲಪಾತದಂತೆ ಭೋರ್ಗರೆಯುತ್ತ ಸಾಗಿತು. ಯಾರೊಬ್ಬರೂ ಶ್ರೀಗಳವರ ಪ್ರವಚನವನ್ನು ಅರ್ಥ ಮಾಡಿಕೊಳ್ಳಲು ಆಗದಾಯಿತು. ಮೂಕವಿಸ್ಮಿತರಾಗಿ ಪರಸ್ಪರ ಒಬ್ಬರನ್ನೊಬ್ಬರು ನೋಡಿಕೊಳ್ಳುವಂತಾಯಿತು. ತಾವು ಅಂದುಕೊಂಡದ್ದು, ಆಡಿಕೊಂಡದ್ದು ಮಹಾಪರಾಧವಾಯಿತು ಎಂದು ಶ್ರೀಗಳವರಿಗೆ ನಮಸ್ಕರಿಸಿ ತಲೆ ಬಾಗಿ ನಿಲ್ಲುವ ಪರಿಸ್ಥಿತಿ ಅವರದಾಯಿತು. ಇದು ನಡೆದುದು ಬೆಂಗಳೂರಿನ ಸರ್ಪಭೂಷಣಮಠದಲ್ಲಿ.

ಅಂತಹ ಪ್ರಬುದ್ಧರು ಶ್ರೀ ಗೌರಿಶಂಕರಮಹಾಸ್ವಾಮಿಗಳವರು. ಅವರು ಲಿಂಗೈಕ್ಯರಾದುದು ಸಮಾಜಕ್ಕಾದ ಬಹು ದೊಡ್ಡ ನಷ್ಟ.

❖



## ಶ್ರೀ ಸಿದ್ಧಲಿಂಗೇಶ್ವರ ವಚನ

ಯೋಗಿಯಲ್ಲ, ಜೋಗಿಯಲ್ಲ, ಶ್ರವಣನಲ್ಲ, ಸನ್ಯಾಸಿಯಲ್ಲ,
ಕಾಳಾಮುಖಿನಲ್ಲ, ಪಾಶುಪತಿಯಲ್ಲ,
ಈ ಷಡುದರುಶನಂಗಳಾಚರಣೆಯಲ್ಲ,
ಶರಣನಾಚರಣೆ ಬೇರೆ
ಆದಿ ಶೈವ, ಮಹಾಶೈವ, ಅನುಶೈವ, ಅಂತರಶೈವ,
ಪ್ರವರ ಶೈವ, ಅಂತ್ಯಶೈವನೆಂಬ ಈ ಆರುಶೈವದ ನೀತಿಯಲ್ಲ
ಇಂತಿವೆಲ್ಲರ ಉತ್ಪತ್ತಿ ಸ್ಥಿತಿ ಲಯಂಗಳಿಗೆ ಕರ್ತ
ಶುದ್ಧ, ವಿಶೇಷ, ನಿರ್ವಾಣವೆಂದು
ವೀರಶೈವ ಮೂರು ತೆರನಾಗಿಪ್ಪುದು
ಆ ಮೂರುತಾನೆ ಆರು ತೆರನಾಗಿ ತೋರಿತ್ತದೆಂತೆದೊಡೆ
ಭಕ್ತ, ಮಹೇಶ್ವರ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯ ಎಂದು
ಇಂತೀ ಆರುಪ್ರಕಾಶದಲ್ಲಿ ವರ್ತಿಸುತ್ತಿಹುದು ವೀರಶೈವ
ಮಹಾಲಿಂಗುರು ಶಿವಸಿದ್ಧೇಶ್ವರ ಪ್ರಭುವೇ

ಈ ವಚನದಲ್ಲಿ ವೀರಶೈವ ಧರ್ಮದ ಸ್ಪಷ್ಟ ರೂಪವನ್ನು ಶ್ರೀ ಸಿದ್ಧಲಿಂಗೇಶ್ವರರು ತಿಳಿಸುತ್ತ ಷಟ್‌ಸ್ಥಲಗಳಲ್ಲಿ ಅದು ವ್ಯವಹರಿಸುವ ರೀತಿಯನ್ನು ವಿವರಿಸುತ್ತಾರೆ.

(ಕೃಪೆ : ಸಮಗ್ರ ವಚನಸಂಪುಟ-ಪುಟ ೧೧, ಕರ್ನಾಟಕ ಸರ್ಕಾರ, ಕರ್ನಾಟಕ ಪುಸ್ತಕ ಪ್ರಾಧಿಕಾರ, ಬೆಂಗಳೂರು)

## ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ

ಆನಂದ ಯೋಗಿಯೆ ರಸನಿಷಿಯೆ ಕೈಮುಗಿವೆ
ಸಾನಂದ ಭಾಗ್ಯವ ನೀಡೆನಗೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನೀನು ಮುಟ್ಟಿದ ಗರಿಕೆ ಸುರಕರುವಾದುದ ಕಂಡೆ
ನೀನು ಮುಟ್ಟಿದ ಬರಡು ಸುರಧೇನು । ನನ್ನತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

'ಎನಗೆ ನೀನೆ ಕಾಯ ಎನಗೆ ನೀನೇ ಪ್ರಾಣ'
ಎನಗೆ ಗತಿಮತಿಯು ನೀ ಸ್ವಾಮಿ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಸೀಮೆಮೀರಿದ ಚೆಲುವ ಕುಲವಮೀರಿದ ಚೆಲುವ
ಕುಲಸೀಮೆ ಮೀರಿದ ನಿಸ್ಸೀಮ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಬಯಲು ಮೂರುತಿಯಾಗಿ ಮೂಡಿರುವ ಶ್ರೀಗುರುವೆ
ಬಯಲುತತ್ವದ ಶ್ರೀಫಲವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

'ಹರನೆ ತನ್ನ ರೂಪವತೋರು'ವಾಶೆಯಿಂದ
ಗುರುನಿಮ್ಮರೂಪಾಗಿ ಬಂದನು । ನನ್ನತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

'ಮುತ್ತು ನುಂಗಿದ ಉದಕಪುಷ್ಪ ನುಂಗಿದಗಂಧ'
ಬಯಲು ನುಂಗಿದ ಬ್ರಹ್ಮವೆನಿಸಿರುವ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನಿಮ್ಮ ಚರಣವ ನೆನೆಯೆ ಕರ್ಮಕತ್ತಲೆ ಕಳೆದು
ಬಾಳೆಲ್ಲ ಬೆಳದಿಂಗಳೆನಿಪುದು । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನಿಮ್ಮ ಚರಣವ ತೊರೆದು ಅನ್ನಕ್ಷೇತ್ರಕೆ ಹೋಗಿ
ಮಂಡೆ ಕೊಡುವವರನೇನಲಿ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಕಣ್ಣುಕಿವಿಗಳ ಕಾಮ ಜಿಹ್ವೆನಾಸಿಕಕಾಮ
ತ್ವಕ್ಕಿನ ಕಾಮಕಳೆಯೆಂದೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

– ಹೆಚ್.ವಿ. ವೀರಭದ್ರಯ್ಯ







## ಸಂಕ್ರಾಂತಿಯ ನೆಲೆ-ಬೆಲೆ

–ಡಾ॥ ಎಂ.ಜಿ. ನಾಗರಾಜ್ *

**ಹೊ**ಸತು ಎಂದಾಗ ಮೊದಲು ಇರಲಿಲ್ಲ, ಮೊದಲಿನ ಅಥವಾ ಮುಂಚಿನ ಬಗೆಯದಲ್ಲ ಎಂಬ ಅರ್ಥ ಒದಗುತ್ತದೆ. ಪರಿವರ್ತನೆ ಆದದ್ದು, ಬದಲಾಯಿಸಿದ್ದು ಎಂದೂ ಆಗಬಹುದು. ಪ್ರಕೃತಿಯಲ್ಲಿ ಮಾರ್ಪಾಡು ನಿರಂತರವೆ. ಬೆಳಗಿನ ಉಷೆಗೆ ನಿತ್ಯ ಹೊಸತಿನ ಕಳೆ. ತಾನು ನವೋನ್ಮೇಷೆಯಾಗುವುದಲ್ಲದೆ ಜಗತ್ತಿನ ಜೀವರಾಶಿಗೂ ಬದಲಾವಣೆಯ ಬೆಳಕನ್ನು ಅಲಂಕಾರವಾಗಿ ಸಡಗರದಿಂದ ತರುತ್ತಾಳೆ. ಸೂರ್ಯನ ಕಿರಣಗಳ ಬೆಳಕಿನ ನಾದಲೀಲೆ ಆಕೆ ಇಳೆಯ ಬೆಳಗಿನ ಚಿಲಿಪಿಲಿಗಳಲ್ಲಿ ರಾಗ ಮೇಳವನ್ನು ಸಂಘಟಿಸುತ್ತಾಳೆ. ಅದೊಂದು ಚೈತನ್ಯದ ಕೊರಳ ವಾದ್ಯದ ಮುದದ ನಾದಮೇಳ. ಇದು ನಿತ್ಯಸಂಕ್ರಾಂತಿ. ಉಷೆ ತರುವ ನಾದ ಕ್ರಾಂತಿ. ಕೇಳುವ ಕಿವಿಗೆ ಕಾವ್ಯದ ರಿಂಗಣ; ಕಾಣುವ ಕಣ್ಣಿಗೆ ಇಳೆಯ ಸಂತೋಷ; ಚಿಂತಿಸುವ ಬುದ್ಧಿಗೆ ಹೊಸ ಹೊಳಹು, ಮಿಡಿವ ಎದೆಗೆ ಹರುಷದ ಪುಳಕ. ಇದು ಬದುಕಿನ ಚೈತನ್ಯವು ಹೌದು, ಆಸೆಯೂ ಹೌದು. ಅಂತಾಗಿ ಸಂಕ್ರಾಂತಿಗೆ ವಿಶೇಷ ಅರ್ಥ ನೈಸರ್ಗಿಕವಾಗಿಯೇ ಒದಗಿದೆ.



ಚಳಿಯ ನಡುಕಕ್ಕೆ ಬೆಚ್ಚಗಿನ ಬಯಕೆಯನ್ನು ಪೂರೈಸುವ ಘಳಿಗೆ ಸಂಕ್ರಾಂತಿ. ನೇಸರ ದಕ್ಷಿಣಾಯನದಿಂದ ಉತ್ತರಾಯಣಕ್ಕೆ ಪಥ ಪದಲಿಸಿ ಸಾಗುವಲ್ಲಿ ಚಳಿಗೆ ವಿದಾಯ ಹೇಳಿ, ಹಿತವಾದ ಬಿಸಿಯಪ್ಪುಗೆ ನೀಡಲೆಳೆಸುತ್ತಾನೆ. ಇದು ನಮ್ಮ ಇಚ್ಛೆಯೊಳಗಣ ಸ್ವಾಗತವೂ ಹೌದು.

ಇರುವುದು ಇದ್ದಂತೆಯೇ ಇರಲಿ ಎಂದರೆ ಅದು ಸಾಂಪ್ರದಾಯಿಕ ಬಗೆ. ಇರುವ ಸ್ಥಿತಿ ಹಾಗೆಯೆ ಮುಂದುವರಿಯಲಿ ಎಂದರೆ ಯಥಾಸ್ಥಿತಿವಾದವಾಗುತ್ತದೆ. ಮೂಲಭೂತವಾದದ ಅಂಟು ಅದಕ್ಕಾಗಬಹುದು. ಆಗ ಸುಖ ಇದ್ದಂತೆಯೇ ಇರಲಿ, ಕಷ್ಟವೂ ಹಾಗೇ ಇರಲಿ ಎಂದಾಗುತ್ತದೆ. ಅದು ಬದುಕಿನ ಸಹಜ ಮಾರ್ಗವಾಗುವುದಿಲ್ಲ. ಸದಾ ಸುಖವಿದ್ದರೆ ಬದುಕಿನಲ್ಲಿ ಪರರ ಕಷ್ಟ ನಿಷ್ಠುರಗಳ ಕಲ್ಪನೆ ಒದಗದಿರಬಹುದು. ಆಗ ತಾನು, ತನ್ನಷ್ಟಕ್ಕೆ ಎಂಬ ಮಿತಿ ಬಂದು ಆತ್ಮರತಿ ಆವರಿಸಬಹುದು. ಸದಾ ಕಷ್ಟವೇ ಇದ್ದರೆ ಬದುಕು ಮುರುಟಿಹೋಗಬಹುದು. ಇವೆರಡರ ಸಮಬಾಳ್ವೆ ಇದ್ದಾಗ ಬದಲಾವಣೆಗಳಲ್ಲಿ ಹದುಳ ಒದಗುತ್ತದೆ. ಕ್ಷೇಮಕಾರಣವಾಗುತ್ತದೆ.

ಹೊಸತು ಅಥವಾ ಬದಲಾವಣೆ ಬಂದಾಗ ಅದು ಹಳತಿನ ಗರ್ಭದಿಂದಲೇ ಎದ್ದು ಬಂದದ್ದು ಎಂಬುದನ್ನು ಅರಿಯಬೇಕು. Any innovation, rises from the womb of the old. ಅಂದರೆ ಹಳೆಯುದರಲ್ಲಿನ ಒಳಿತು, ಹೊಸತಿಗೆ ಅನುಭವ ಮಾರ್ಗದರ್ಶಿಯಾಗಿರುತ್ತದೆ. ಅಲ್ಲಿಂದ ಮುಂದೆ ಸಾಗಿ ಪ್ರಗತಿ ಕಂಡುಕೊಳ್ಳುವುದು ಹೊಸತಿಗೆ ಇರುವ ಅವಕಾಶ ಚೈತನ್ಯ. ಅಂತೇ ಸಂಕ್ರಾಂತಿಯ ಅರ್ಥವನ್ನು ಹದುಳವಾಗಿ ಅರ್ಥೈಸಿಕೊಳ್ಳಬೇಕು. ಹಳತೆಲ್ಲ ಹೋಗಿಬಿಡಲಿ ಎಂದರೆ ನಮಗೆ ಅಸ್ತಿಭಾರವಿರದೆ, ಸಂಸ್ಕೃತಿ ಪರಂಪರೆ ಇಲ್ಲವೆಂದಾಗುತ್ತದೆ. ಹಾಗೆಯೇ ಹೊಸತಿನ ನಿರಾಕರಣೆ ಎಂದರೆ ಪ್ರಗತಿಯ ಕಾಳಜಿ ಪೇಲವವಾಗುತ್ತದೆ. ಅಂತಾಗಿ ಸಮನ್ವಯವನ್ನು ಸೂಕ್ತವಾಗಿ ಸಾಧಿಸಿದಾಗ ಸಂಕ್ರಾಂತಿ. ಅರ್ಥಾತ್ ಒಳ್ಳೆಯ ಕ್ರಾಂತಿ. ಸೂರ್ಯ ಇದನ್ನು ನಮಗೆ ತೋರಿಕೊಡುತ್ತಲೇ ಬಂದಿದ್ದಾನೆ. ಸೂರ್ಯನು ಬೃಹತ್ ನಕ್ಷತ್ರವಾಗಿ ತಾನೂ ತಿರುಗುತ್ತಾನೆ. ಭೂಮಿ ಸ್ವತಃ ತಾನು ತನ್ನ ನೆಲೆಯಲ್ಲಿ ತಿರುಗುತ್ತಲೇ ಸೂರ್ಯನನ್ನು ಸುತ್ತುತ್ತದೆ. ಹೀಗೆ ಸುತ್ತುವ ಕ್ರಿಯೆಯಲ್ಲಿ ಹಗಲು, ರಾತ್ರಿ ಹೇಗೋ

* 221, 68ನೇ ಕ್ರಾಸ್, 5ನೇ ಬ್ಲಾಕ್, ರಾಜಾಜಿನಗರ, ಬೆಂಗಳೂರು–560 010.



ಬೆಳಕು, ಕತ್ತಲೆಯೂ ಹಾಗೆಯೇ, ಎರಡರಲ್ಲೂ ಕಾವ್ಯ ಕಾಣುವವ ಕವಿ; ಸಮತ್ವ ಕಾಣುವವ ನಿರಂಜನ. ಇಲ್ಲಿ ಆಧಾರವಾದ ಸ್ಥಿತಿ ಬಿಂಬ. ಚಲಿಸುವ ಗತಿ ಬಿಂಬಗಳನ್ನು ಪರಿಭಾವಿಸಬೇಕು. ಶರಣರು ಕಂಡದ್ದು ಈ ಸ್ಥಿತಿ. ತಾವು ಬದುಕಿದುದಲ್ಲದೆ ಪರರೂ ಬದುಕುವಂತೆ ಮಾಡಿದರು. ಕೆಳಗೆ ಇದ್ದವರು. ಕೆಳಗೆ ಇರಬೇಕೆಂಬ ಸ್ಥಿತಿಯನ್ನು ಬದಲಾಯಿಸಿ ಸತ್ಕ್ರಾಂತಿ ಸಾಧಿಸಿದರು; ಸಂಕ್ರಾಂತಿ ತೋರಿದರು. ಮಾತಾಡದಿದ್ದವರಿಗೆ ಮಾತು ಕಲಿಸಿ ಸ್ವಂತಿಕೆಯ ಚೆಲುವನ್ನು ಮನವ ಮೂಡಿಸಿ ತನ್ಮಯ ಗೊಳಿಸಿದ ಕೀರ್ತಿಶಾಲಿಗಳಾದರು. ಕಣ್ಣು ತುಂಬಿದ ಬಳಿಕ ನೋಡಲಿಲ್ಲ, ಕಿವಿ ತುಂಬಿದ ಬಳಿಕ ಕೇಳಲಿಲ್ಲ ಎಂದರೆ, ಲಿಂಗಯ್ಯ ಊರ್ಧ್ವಲಿಂಗನಾಗಿ, ಸರ್ವಾಂಗಲಿಂಗವಾಗಿ ಯೋಗಲಿಂಗವಾಗಿ ಆವರಿಸಿದಾಗ, ಬೇರೆಯ ಕೆಡುಕೇನೂ ಕಾಣಬಾರದಲ್ಲವೆ! ಕೆಟ್ಟುದು ಕೇಳಬರದಲ್ಲವೆ! ಅನುಭಾವ ಕ್ರಾಂತಿ. ಇಂಥ ಯೋಗ ನಮಗೆ ಐದು ಸಾವಿರ ವರ್ಷಗಳಿಂದಲೂ ಒದಗಿ ಬಂದಿದೆ. ಭಾರತೀಯ ಸಂಸ್ಕೃತಿ ನಮಗೆ ಕೊಟ್ಟ ಆಧಾರ ಅದು. ಶರಣರನ್ನು ಸೃಷ್ಟಿಸಿದಂಥ ಸಂಸ್ಕೃತಿ ಅದು.

ಸೈಂಧವ ಸಂಸ್ಕೃತಿಕಾಲದಿಂದ ಭಾರತ ಬೆಳೆದ ಪುಷ್ಟಿಯ ಬೆಳೆ ಎಳ್ಳು ನಮ್ಮ ಜನ ಬೆಲ್ಲವನ್ನು ಕೂಡಿಸಿದರು. ಸಂಕ್ರಾಂತಿಯಂದು ಎರಡನ್ನು ಸೇರಿಸಿ, 'ಎಳ್ಳು ಬೆಲ್ಲ ಕೊಟ್ಟು ಒಳ್ಳೆಯ ಮಾತಾಡು' ಎಂದರು. ನಮ್ಮ ಸಂಸ್ಕೃತಿ ಹಡೆದ ಈ ಸಂಕ್ರಾಂತಿಯ ನುಡಿಗಳು, ಇಂದಿನ ಎಂತೆಲ್ಲ ಸಂಘರ್ಷಗಳಿಗೆ ಇಟ್ಟಿರುವ ಮಾರ್ಗದರ್ಶಕ ಅಹ್ವಾನ!

ಇದೆಲ್ಲ ನಮ್ಮ ದೈನಂದಿನ ಬಾಳುವೆಯಲ್ಲಿ ಅಚ್ಚುಗೊಂಡಿರುವ ಬಗೆಯನ್ನು ಕಾಣಬೇಕು. ಮಕರ ಸಂಕ್ರಾಂತಿಯ ಪರ್ವ ಸಮಯ. ಮೈಯ ಚಳಿಗೆ ಹದನಾದ ಬಿಸಿಯಪ್ಪುಗೆ ಕೊಟ್ಟ ಸೂರ್ಯನಿಗೆ ಸಡಗರದಿಂದ ನಮಿಸುವದಿನ. ಎಳ್ಳು, ಬೆಲ್ಲ ಮನೆಮನೆಗೆ ಹಂಚುವ ಸಡಗರದ ಜೊತೆಗೆ ಗೋವುಗಳನ್ನು ಕಿಚ್ಚು ಹಾಯಿಸುವ ಪವಿತ್ರ ಕ್ರೀಡೋತ್ಸಾಹ ಅಂದು ಜನತೆಯಲ್ಲಿ ಮೈದುಂಬಿರುತ್ತದೆ. ಮನೆಮನೆಯಲ್ಲಿ ಪೊಂಗಲ್ ಉಣಿಸು ಇರುತ್ತದೆ. ಕೇರಳದ ಶಬರಿಮಲೈನಲ್ಲಿ ಮಕರವಿಳಕ್ಕು ಮಕರಜ್ಯೋತಿ ಕಂಡು ನಮಿಸುವ ಅಸಂಖ್ಯಾತ ಭಕ್ತಸಮೂಹ. ಮಥುರಾ ಹಾಗೂ ವೃಂದಾವನದ ಇಟಾನಗರದ ಲೋಹಿತ್ ನಡಿಯಲ್ಲಿ ಶಂಕರಾಚಾರ್ಯರ ನೇತೃತ್ವದಲ್ಲಿ ಭಕ್ತರ ಪವಿತ್ರಸ್ನಾನ, ಕಾರಣ ಕೃಷ್ಣ ಬಲರಾಮರು ಕಂಸನನ್ನು ಮರ್ದಿಸಿದ ದಿನವಿದು. ಅಸ್ಸಾಮ್, ಬಿಹಾರ ಮತ್ತು ತಮಿಳುನಾಡಿನಲ್ಲಿ ಸಂಭ್ರಮದ ಪೊಂಗಲ್ ಹಬ್ಬದ ದಿನವಿದು. ಬೆಂಗಳೂರಿನ ಗವಿಗಂಗಾಧರೇಶ್ವರ ಲಿಂಗದ ಮೇಲೆ ಸಂಜೆಯವೇಳೆಗೆ ಸೂರ್ಯನ ಕಿರಣಗಳು ಬೀಳುವ ಚೆಲುವಿನ ದೃಶ್ಯ, ಆಸ್ತಿಕರಿಗೆ ಪವಿತ್ರ ಪುಳಕವನ್ನು ಉಂಟು ಮಾಡುತ್ತದೆ ಈ ದಿನ.

ಕೊಡಗಿನ ಹೆಗ್ಗಡಹಳ್ಳಿಮಠದ ಗುರುಗಳು ದಲಿತ ಕೊಟವಳಿ-ಕಣಿಯ ಪ್ರತಿನಿಧಿಗಳೊಡನೆ ಸಂಕ್ರಾಂತಿ ಜಾತ್ರೆಗೆ -ಗೊದ್ದ ಗ್ರಾಮದ ಕುಮಾರಲಿಂಗೇಶ್ವರ ಜಾತ್ರೆಗೆ ಹೋಗಿ ಭಕ್ತಜನರಿಗೆ ಆಶೀರ್ವದಿಸಿ, ಕಷ್ಟ ನಿಷ್ಠುರಗಳಿಗೆ ಪರಿಹಾರ ಸೂಚಿಸುತ್ತಾರೆ; ಇದೇ ಸಂದರ್ಭದಲ್ಲಿ ಅವರೆದಾಳುವಿನ ಹುಲುಕೋಡಯ್ಯನ ಜಾತ್ರೆಗೂ ಮರುದಿನ ಹೋಗಿ ಬರುತ್ತಾರೆ. ಅಲ್ಲಿ ಹುಲುಕೊಂಡಯ್ಯ ಮತ್ತು ದಲಿತ ಹೆಣ್ಣಿನ ಕಟ್ಟೆಗೆ ವೀರಶೈವರು ಪೂಜಾದಿಗಳನ್ನು ನಡೆಸುತ್ತಾರೆ. ಆ ದಲಿತ ಹೆಣ್ಣು ಹುಲುಕೋಡಯ್ಯನಿಗೆ ಪ್ರಿಯೆಯೂ ಆಗಿದ್ದವಳು. ಅವನ ತಾಯಿಯಿಂದಲೂ ಆದರ ಗೊಂಡಿದ್ದಳು. ಅವರದಾಳು ಸಂಕ್ರಾಂತಿ ಜಾತ್ರೆಯಲ್ಲಿ ದಲಿತ ಕೊಟವಳಿ ಕಣಿಯರು ವೀರಭದ್ರ ಹಲಗೆ ಹಿಡಿದು ಕುಣಿತ ವಾಡುತ್ತಾರೆ. ದಕ್ಷಿಣ ಕನ್ನಡ ಜಿಲ್ಲೆಯ ಹಿರಿಯಡ್ಕದ ಮಹತೋಭಾರ ಶ್ರೀ ವೀರಭದ್ರ ದೇಗುಲದಲ್ಲಿ ವೃಶ್ಚಿಕ ಸಂಕ್ರಮಣ ದೀಪೋತ್ಸವವು ಕಾರ್ತೀಕ ಮಾಸದಲ್ಲಿ ನಡೆಯುತ್ತದೆ. ಇದನ್ನು ಅಲ್ಲಿ ಜಾನಪದೀಯವಾಗಿ ಕೊಡಿ ಸಂಕ್ರಾಂತಿ ಎನ್ನುತ್ತಾರೆ.







ಸಿದ್ಧಗಂಗಾ ಪರಿಸರದ ಬೆಳಗುಂಬದಲ್ಲಿ ಸಿದ್ಧರಾಮೇಶ್ವರರ 75ನೇ ಮಹಾಗದ್ದುಗೆ ಇದೆ. ಬೆಳಗುಂಬಕ್ಕೆ ಭದ್ರಾಚಲವೆಂದೂ ಹೆಸರಿದೆ. ಕಾರಣ ವೀರಭದ್ರನು ಮಾಳವ ದೇಶಾಧಿಪತಿ ರುದ್ರಭೂಪತಿಗೆ ದರ್ಶನವಿತ್ತ ಸ್ಥಳ-ತೇಜಸ್ಸಿನಿಂದ ಕಂಗೊಳಿಸಿದ ಕಾರಣ ದ್ಯುತಿನಾಮಕಪುರ-ಬೆಳಗುಂಬ ಎಂಬ ಹೆಸರಾಯಿತು ಎಂದು ಸ್ಥಳಪುರಾಣದ ಮಾತು. ಇಲ್ಲಿನ ಗಂಗಾಬಿಂದುವು ರುದ್ರನಿರ್ಮಿತವಾದ ಕಾರಣ ರುದ್ರತೀರ್ಥವೆಂದು ಹೆಸರಾಯಿತಂತೆ. ಶ್ರೀ ಸಿದ್ಧರಾಮೇಶ್ವರರು ಈ ರುದ್ರತೀರ್ಥದಲ್ಲಿ ಮಿಂದು, ತ್ರೈಲಿಂಗೇಶ್ವರನನ್ನು ಅರ್ಚಿಸಿ ನಂತರ ಗಿರಿಯ ತುದಿಯ ಬಂಡೆಯ ಮೇಲೆ ಶಿವಯೋಗಾನಿದ್ರಾಮುದ್ರಿತರಾದರು. ಅಂದಿನಿಂದ ಈ ಗಿರಿಯು ಶ್ರೀ ಸಿದ್ಧರಾಮಾಚಲವೆಂದು ಪ್ರಸಿದ್ಧಗೊಂಡಿತು. ಮಡಿವಾಳ ಮಾಚಿದೇವರೂ ಈ ಕ್ಷೇತ್ರದಲ್ಲಿ ಮೂರು ವರುಷಗಳ ಕಾಲ ಶಿವಯೋಗ ತಪದಲ್ಲಿದ್ದರಂತೆ. ಇಂಥ ಶರಣಕ್ಷೇತ್ರದಲ್ಲಿ ಪ್ರತಿವರ್ಷ ಮಕರ ಸಂಕ್ರಾಂತಿ ಉತ್ತರಾಯಣ ಪುಣ್ಯ ಕಾಲದಿಂದ ಮೂರುದಿನ ಶ್ರೀ ಸಿದ್ಧರಾಮೇಶ್ವರ ಜಯಂತಿ ಜಾತ್ರಾ ಮಹೋತ್ಸವವು ನಡೆಯುತ್ತದೆ. ಶ್ರೀ ಸಿದ್ಧರಾಮೇಶ್ವರ ಗದ್ದುಗೆ ದೇಗುಲದ ವಿಮಾನಗೋಪುರ ವಾಸ್ತುವು ಅತ್ಯಂತ ಆಕರ್ಷಕವಾದ ರಚನೆಯದಾಗಿದೆ. ಗೋಪುರ ಭಾಗದಲ್ಲಿ ಚತುರ್ಮುಖ, ಅಷ್ಟಮುಖ ಹಾಗೂ ವೃತ್ತಾಕಾರದ ಹಂತಗಳನ್ನು ಕೀರ್ತಿಮುಖಗಳೊಡನೆ ಹೊಂದಿ ವಿಶಿಷ್ಟವಾಗಿ ಕಾಣುತ್ತದೆ. ಅಂತಾಗಿ ಸಿದ್ಧಗಂಗಾ ಕ್ಷೇತ್ರ ಪರಿಸರವು ಶರಣರ ಕ್ಷೇತ್ರವಾಗಿ(ಸಿದ್ಧರಾಮೇಶ್ವರ, ಮೇದಾರ ಕೇತಯ್ಯ, ಮಡಿವಾಳ ಮಾಚಯ್ಯ) ನಮ್ಮ ಸಾಂಸ್ಕೃತಿಕ ಆಚರಣೆಗಳ ಸಮನ್ವಯ ಕ್ಷೇತ್ರವಾಗಿಯೂ ಕಂಗೊಳಿಸಿದೆ. ಹೀಗೆ ಸಂಕ್ರಾಂತಿಯ ಎಳ್ಳು-ಬೆಲ್ಲದ ಪಾರಂಪರಿಕ ಮಾಧುರ್ಯವನ್ನು ನಮ್ಮ ಬದುಕಿಗೆ ಕೊಟ್ಟಿರುವುದನ್ನು ಸಮರಸ ದೃಷ್ಟಿಯಿಂದ ಸವಿಯಬೇಕು. ಮನಸ್ಸಿಗೆ ಹರುಷದ ಹದುಳವನ್ನು ಪಡೆಯ ಬೇಕು. ಸಂಕ್ರಾಂತಿಯ ವೈವಿಧ್ಯತೆ ನಮ್ಮ ಬದುಕಿಗೂ ಇರಬೇಕು.

ಎಳ್ಳು, ಬೆಲ್ಲ ಸೇರುವುದೇ ಮಾತಿನ ಮಾಧುರ್ಯಕ್ಕೆ ಮುನ್ನುಡಿ
ಸೂರ್ಯ, ಚಳಿಯ ತವಿದು ಹಿತದ ಬಿಸಿಯನೀಡಿ ಹೊಸತಿಗೆಳಸಿ
ಮುದವ ಹರಸಿರೆ, ಎಳ್ಳುಬೆಲ್ಲದ ಪುಷ್ಟಿ ಇತ್ತಿದೆ ಕಸುವಿನ ನಾಡಿ
ಹಳತಿನ ನೆಲದ ಮೊಳಕೆ ಹೊಸತು ಸಸಿಗೆ ನಿಮಿರುನೀಡೆ
ಉಭಯ ಮಿಲನ ಸಮರಸದ ಶಕೆಗೆ ನಾಂದಿಯಾಡೆ
ಬದುಕು ಮಿಡಿವುದು ಹೊಸ ಬೆಳಸಿಗೆ, ನೇಸರನ ಮಾದರಿಯ ನಡೆಗೆ
ಇದರ ಅರಿವ ನೋಡಿದರೆ ಅಳಿವು; ಅರಳಿಸಿದರೆ ನಿತ್ಯನಲಿವು
ಕಾಣಾ ಅಚಲದೇವ ನಾಗೊಡೆಯ' ❖

## ಬಸವೇಶ್ವರರಿಗೆ

ಕಾರ್ತಿಕದ ಕತ್ತಲಲಿ ಆಕಾಶ ದೀಪವಾಗಿ ನೀ ಬಂದೆ
ನೀ ಬಂದೆ,
ಬಟ್ಟೆಗೆಟ್ಟವರಿಗೊಂದು ದೊಂದಿ ದಿಕ್ಕಾಗಿ
ಎಂಟು ಶತಮಾನಗಳ ಹಿಂದೆ,
ಅಗ್ನಿ ಖಡ್ಗವನಾಂತ ಓ ಆಧ್ಯಾತ್ಮ ಕ್ರಾಂತಿವೀರ,
ದೇವದಯೆಯೊಂದು ಹೇ ಧೀರಾವತಾರ,
ಶ್ರೀ ಬಸವೇಶ್ವರರಾ !
ಜಾತಿ ಪದ್ಧತಿಯ ಹೋಮ ಕೂಪಕ್ಕೆ !
ಬಿದ್ದು, ವೈದಿಕರ ಯಜ್ಞಷಾಪಕ್ಕೆ
ಬಲಿಪೋದ ದಲಿತ ಜೀವರನ್ನೆತ್ತಿ ಮತಿ ವಿಚಾರಕ್ಕೆ,
ಕಾಯಕದ ದಿವ್ಯತತ್ತ್ವದ ಸುಕ್ಷೇಮ ಧರ್ಮವಿನಾಕಕ್ಕೆ
ನಡೆಸಿದ ಮಹಾತ್ಮನೆ, ನಿನಗೆ ನಮೋ ನಮಃ !
ಇಂದಿಗೂ ನಾವು ನಿನ್ನೆತ್ತರಕೆ ಏಳಲಾರದೆ ಅಯ್ಯೋ
ಮತದ ಉಸುಬಿಗೆ ಸಿಲುಕಿ ತತ್ತರಿಸುತಿಹೆವಯ್ಯಾ!
ಬಾರಯ್ಯಾ, ಕೈಹಿಡಿದೆತ್ತಿ ಬದುಕಿಸು ನಮ್ಮನೆಳೆದು
ವರ್ಣಾಶ್ರಮದ ಹೆಸರ ಹೊಲೆಗೆಸರ ವಂಚನೆ ಕುಂಡದಿಂದೆ;
ಭಕ್ತಿಗಂಗೆಯನೆರೆದು
ಭಾಗವತ ಶಕ್ತಿಯಂ ಕರೆದು
ಮತಮೌಢ್ಯದಜ್ಞಾನ ಪಂಕವನು ತೊಳೆದು
ಶುಚಿಗೊಳಿಸು ವಿಜ್ಞಾನ ವೇದಾಂತ ತೀರ್ಥದಿಂದೆ!

-ಕುವೆಂಪು

## ೨೦೧೨ನೇ ವರ್ಷದ ಬಸವಾದಿ ಶರಣರ ಸ್ಮರಣೋತ್ಸವಗಳು

| ಕ್ರ. | ದಿನಾಂಕ | ಸಂದರ್ಭ | ಶರಣರು |
|---|---|---|---|
| 1. | ಜನವರಿ ೯– ಸೋಮವಾರ | ಬನದ ಹುಣ್ಣಿಮೆ | ಮೇದಾರ ಕೇತಯ್ಯ |
| 2. | ಜನವರಿ ೧೫– ರವಿವಾರ | ಸಂಕ್ರಮಣ | ಸಿದ್ಧರಾಮೇಶ್ವರ |
| 3. | ಜನವರಿ ೨೩– ಸೋಮವಾರ | ಅವರಾತ್ರಿ ಅಮಾವಾಸ್ಯೆ | ಜೇಡರ ದಾಸಿಮಯ್ಯ |
| 4. | ಫೆಬ್ರವರಿ ೭ – ಮಂಗಳವಾರ | ಭಾರತ ಹುಣ್ಣಿಮೆ | ಕಿನ್ನರಿ ಬೊಮ್ಮಯ್ಯ |
| 5. | ಫೆಬ್ರವರಿ ೨೧– ಮಂಗಳವಾರ | ಮಹಾಶಿವರಾತ್ರಿ | ಡೋಹರ ಕಕ್ಕಯ್ಯ |
| 6. | ಮಾರ್ಚ್ ೮ – ಗುರುವಾರ | ಹೋಳಿ ಹುಣ್ಣಿಮೆ | ಬಿಬ್ಬಿ ಬಾಚಯ್ಯ |
| 7. | ಮಾರ್ಚ್ ೨೩ –ಶುಕ್ರವಾರ | ಯುಗಾದಿ ಪಾಡ್ಯ | ಅಲ್ಲಮಪ್ರಭುದೇವ |
| 8. | ಏಪ್ರಿಲ್ ೬ – ಶುಕ್ರವಾರ | ದವನದ ಹುಣ್ಣಿಮೆ | ಅಕ್ಕಮಹಾದೇವಿ |
| 9. | ಏಪ್ರಿಲ್ ೨೪– ಮಂಗಳವಾರ | ಅಕ್ಷಯ ತೃತೀಯ | ಬಸವಣ್ಣನವರು |
| 10. | ಮೇ ೨೦ – ರವಿವಾರ | ಬಾದಾಮಿ ಅಮಾವಾಸ್ಯೆ | ಕುರುಬ ಗೊಲ್ಲಾಳ |
| 11. | ಜೂನ್ ೪– ಸೋಮವಾರ | ಕಾರ ಹುಣ್ಣಿಮೆ | ಅಂಬಿಗರ ಚೌಡಯ್ಯ |
| 12. | ಜುಲೈ ೩ – ಮಂಗಳವಾರ | ಕಡ್ಲಿಗಡಬ ಹುಣ್ಣಿಮೆ | ಹಡಪದ ಅಪ್ಪಣ್ಣ |
| 13. | ಜುಲೈ ೨೩ – ಸೋಮವಾರ | ನಾಗಪಂಚಮಿ | ಅಕ್ಕನಾಗಮ್ಮ |
| 13. | ಜುಲೈ ೨೩– ಸೋಮವಾರ | ಶ್ರಾವಣ ಸೋಮವಾರ | ಶಂಕರ ದಾಸಿಮಯ್ಯ |
| 14. | ಆಗಸ್ಟ್ ೨– ಗುರುವಾರ | ನೂಲಹುಣ್ಣಿಮೆ | ನುಲಿಯ ಚಂದಯ್ಯ |
| 15. | ಸೆಪ್ಟೆಂಬರ್ ೧೯– ಬುಧವಾರ | ಗಣೇಶ ಚೌತಿ | ಮಡಿವಾಳ ಮಾಚಿದೇವ |
| 16. | ಅಕ್ಟೋಬರ್ ೨೩– ಮಂಗಳವಾರ | ಮಹಾನವಮಿ | ಹರಳಯ್ಯ ಮಧುವಯ್ಯ |
| 17. | ಅಕ್ಟೋಬರ್ ೨೪ ಬುಧವಾರ | ವಿಜಯದಶಮಿ | ಕಲ್ಯಾಣಕ್ರಾಂತಿ ವಿಜಯ |
| 18. | ಅಕ್ಟೋಬರ್ ೨೯ ಸೋಮವಾರ | ಶೀಗೆ ಹುಣ್ಣಿಮೆ | ಗಂಗಾಂಬಿಕೆ |
| 19. | ನವೆಂಬರ್ ೧೪– ಬುಧವಾರ | ದೀಪಾವಳಿ ಪಾಡ್ಯ | ಚೆನ್ನಬಸವಣ್ಣ |
| 20. | ನವೆಂಬರ್ ೨೮ – ಬುಧವಾರ | ಗೌರಿ ಹುಣ್ಣಿಮೆ | ನೀಲಾಂಬಿಕೆ |
| 21. | ಡಿಸೆಂಬರ್ ೧೩– ಗುರುವಾರ | ಭಟ್ಟ ಅಮಾವಾಸ್ಯೆ | ದಾನಮ್ಮ |
| 22. | ಡಿಸೆಂಬರ್ ೨೮ – ಶುಕ್ರವಾರ | ಹೊಸ್ತಿಲ ಹುಣ್ಣಿಮೆ | ಮಾದಾರ ಚೆನ್ನಯ್ಯ |

### ವಿಶೇಷ ಸ್ಮರಣೋತ್ಸವಗಳು

| ಕ್ರ. | ದಿನಾಂಕ | ಶರಣರು |
|---|---|---|
| 23. | ಫೆಬ್ರವರಿ ೧೮ – ಶನಿವಾರ | ಶರಣ ಹರ್ಡೇಕರ ಮಂಜಪ್ಪನವರು |
| 24. | ಜುಲೈ ೨ – ಸೋಮವಾರ | ಶರಣ ಫ.ಗು. ಹಳಕಟ್ಟಿಯವರು |
| 25. | ಅಕ್ಟೋಬರ್ ೨೮ – ರವಿವಾರ | ಶರಣ ಉತ್ತಂಗಿ ಚೆನ್ನಪ್ಪನವರು |

ಸಂಗ್ರಹ :
ಪ್ರೊ. ಸಿದ್ಧಣ್ಣ ಲಂಗೋಟಿ(ಚಾಂದಕವಠೆ)
ಗೌರವ ಸಂಪಾದಕರು, ಬಸವ ಬೆಳಗು ಪತ್ರಿಕೆ, ರಾಮದುರ್ಗ-೫೯೧ ೧೨೩. ಬೆಳಗಾವಿ ಜಿಲ್ಲೆ.







## ಶ್ರೀ ಅಟವೀಶಿವಯೋಗಿಗಳು

–ಮುದ್ದೇನಹಳ್ಳಿ ನಂಜಯ್ಯ *



*ಶೀಲವಂತನಾದಡೆ ಜಾತಿಯ ಬಿಡಬೇಕು*
*ಶಿವಜ್ಞಾನಿಯಾದೊಡೆ ಸಮಯವಬಿಡಬೇಕು*
*ಹೀಂಗಲ್ಲದೆ ಜಗದಲ್ಲಿ ನಡೆವ ಭ್ರಾಂತರ ಸುದ್ದಿಯೇಕೆ*
*ವಿಭ್ರಾಂತ ಶರಣಂಗೆ ಅಮುಗೇಶ್ವರಾ*

ನಿಜವಾದ ಜ್ಞಾನಿ ಜಾತ್ಯಾತೀತ, ಕಾಲಾತೀತ ಹಾಗೂ ಧರ್ಮಾತೀತನಾಗಿರಬೇಕು. ಜಗದಲ್ಲಿನ ಭ್ರಾಂತಿಗೆ ತಲೆಗೊಡದ ನಿಭ್ರಾಂತ ಶರಣ ತಾವರೆ ಎಲೆಯ ಮೇಲಿನ ಬಿಂದುವಿನಂತೆ ಲೌಕಿಕದಲ್ಲಿದ್ದೂ ಇಲ್ಲದಂತಿರುವುದೇ ಶಿವಜ್ಞಾನಿಯ ಲಕ್ಷಣ ಎನ್ನುವ ರಾಯಮ್ಮನ ವಚನದಂತೆ ಅಟವೀ ಶಿವಯೋಗಿಗಳ ಧ್ಯೇಯವೂ ಇದೇ ಆಗಿರುತ್ತದೆ.

ಅಟವೀಶರ ತಾಯಿ ತಂದೆಗಳು ಸುಮತೀದೇವಿ–ಸುಜ್ಞಾನದೇವರು. ಸುಮತಿ ಸುಜ್ಞಾನಗಳು ಮೇಳೈಸಿದಲ್ಲಿ ಶಿವಯೋಗಿಯ ಸಾಕ್ಷಾತ್ಕಾರವಾಗುವುದು ಸಹಜ. ಜನಿಸಿದ ಮಗುವಿಗೆ ರುದ್ರಮುನಿ ಶಿವಾಚಾರ್ಯರಿಂದ ಲಿಂಗಧಾರಣ, ಪಾದೋದಕ ಲಭಿಸುತ್ತದೆ. ರೇಚಯ್ಯನೆಂದು ನಾಮಕರಣ ವಾಗುತ್ತದೆ. ಅವಿರಳಜ್ಞಾನಿ ಚೆನ್ನಬಸವಣ್ಣನವರ ಶಿಷ್ಯ ರೇಚಯ್ಯನೇ ಅಂಕಲಿಯ ಅಡವಿಯಲ್ಲಿ ತಪಗೈದು ಅಡವೀಶ ನಾಗಿ ೭೭೭ ವರುಷ ಬಾಳಿದರು ಎಂಬ ಐತಿಹ್ಯವೂ ಇದೆ.

ಅಟವೀಸ್ವಾಮಿಗಳು ಒಂದು ಕಡೆ ನೆಲೆ ನಿಂತವರಲ್ಲ. ಅವರು ಸದಾ ಸಂಚಾರಿಗಳು. ಅವರ ಕಾರ್ಯಕ್ಷೇತ್ರ ಮಾತ್ರ ಹೆಚ್ಚಾಗಿ ತುಮಕೂರು ಜಿಲ್ಲೆಯಾಗಿದೆ. ಕ್ರಿ.ಶ. ೧೮೧೫ರಿಂದ ೧೯೦೧ರವರೆಗೆ ಜೀವಿಸಿದ್ದ ಅಟವೀಸ್ವಾಮಿಗಳ ಮೂಲ ಬೆಳಗಾವಿ ಜಿಲ್ಲೆಯ ಗೋಕಾಕ ತಾಲ್ಲೂಕಿನ ಅಂಕಲಿಗಿ ಯಾಗಿದ್ದು ನಂತರ ತುಮಕೂರು ಪ್ರದೇಶದ ಪರಿಸರದಲ್ಲಿ ಸಂಚರಿಸಿ ತುಮಕೂರು ತಾಲ್ಲೂಕಿನ ಚಿಕ್ಕತೊಟ್ಟಲು ಕೆರೆಯಲ್ಲಿ ಲಿಂಗೈಕ್ಯರಾಗಿರುತ್ತಾರೆ.

ಅಟವೀಸ್ವಾಮಿಗಳನ್ನು ಪ್ರತಿಬಿಂಬಿಸುವ ಕುರುಹುಗಳು ಮತ್ತು ತೋರುಗದ್ದುಗೆಗಳು ತುಮಕೂರು ಜಿಲ್ಲೆಯ ಸಿದ್ಧಗಂಗೆ, ಕೆಂಕೆರೆ, ಗುಬ್ಬಿ ತೊರೆಯಮಠ, ಕುಣಿಗಲ್, ಧಾರವಾಡ ಜಿಲ್ಲೆಯ ಬೆಳ್ಳಗಟ್ಟಿ, ಬ್ರಹ್ಮನಕಟ್ಟೆ, ಮಂಟೂರು, ಬೆಳಗಾವಿ ಜಿಲ್ಲೆಯ ಅಂಕಲಿಗಿ, ಅತ್ತರಗಿ, ಅಥಣಿ, ಚಿಕ್ಕಮಗಳೂರು ಜಿಲ್ಲೆಯ ಗಿರಿಯಾಪುರ, ಶಿವನಿ, ಬೆಂಗಳೂರು ಜಿಲ್ಲೆಯ ಮತಕೂರು ಮೊದಲಾದ ಕಡೆ ಕಾಣಸಿಗುತ್ತವೆ.

ಗುಬ್ಬಿಯ ಚನ್ನಬಸವೇಶ್ವರ ದೇವಾಲಯದ ಎಡಭಾಗ ದಲ್ಲಿ ಸ್ವತಃ ನಿರ್ಮಿಸಿದ ಕಲ್ಯಾಣಿ ಇದೆ. ಇದಕ್ಕೆ ಪಾಪನಾಶಿನಿ ಎಂದು ಕರೆದು ಶಾಸನವನ್ನು ಬರೆಸಿದ್ದಾರೆ. ಅಲ್ಲದೆ ಚೆನ್ನಬಸವೇಶ್ವರರಿಗೆ ಬೆಳ್ಳಿ ಪಲ್ಲಕ್ಕಿ ಮಾಡಿಸಲು ಕೆಲಸ ಆರಂಭಿಸಿದರು. ಅದು ಪೂರ್ಣವಾಗುವ ಮೊದಲೇ ಸ್ವಾಮಿ ಗಳು ಲಿಂಗೈಕ್ಯರಾಗಿದ್ದರು. ಆ ಪಲ್ಲಕ್ಕಿಯಲ್ಲಿಯೇ ಇಂದಿಗೂ ಚೆನ್ನಬಸವೇಶ್ವರರ ಉತ್ಸವ ನಡೆಯುತ್ತಲಿದೆ.

ಪ್ರತಿವರ್ಷ ಕಾರ್ತೀಕ ಶುದ್ಧ ದಶಮಿಯಲ್ಲಿ ಚಿಕ್ಕತೊಟ್ಲು ಕೆರೆ, ಗುಬ್ಬಿಯಲ್ಲಿ ಅವರ ಸಂಸ್ಮರಣ ಮಹೋತ್ಸವ ಜರುಗಿದರೆ ಜನವರಿಯ ಸಂಕ್ರಾಂತಿ ಸಂದರ್ಭದಲ್ಲಿ ಸಿದ್ಧಗಂಗೆಯಲ್ಲಿ ಗುರುಶಿಷ್ಯರಾದ ಅಟವೀಸ್ವಾಮಿಗಳು ಮತ್ತು ಉದ್ದಾನಸ್ವಾಮಿ ಗಳ ಆರಾಧನಾ ಮಹೋತ್ಸವ ಒಟ್ಟಿಗೆ ಬಹಳ ವಿಜೃಂಭಣೆ ಯಿಂದ ನಡೆದುಕೊಂಡು ಬರುತ್ತಿದೆ.

* ಅಧ್ಯಕ್ಷರು, ತುಮಕೂರು ತಾಲ್ಲೂಕು ಶರಣ ಸಾಹಿತ್ಯ ಪರಿಷತ್ತು, ತುಮಕೂರು.

ಶ್ರೀ ಸಿದ್ಧಗಂಗಾ ಮಠದ ಕಾರ್ಯಾಧ್ಯಕ್ಷರಾಗಿದ್ದುಕೊಂಡು ಏಕಕಾಲದಲ್ಲಿ ಗುಬ್ಬಿಯ ತೊರೆಯಮಠ, ಚಿಕ್ಕತೊಟ್ಲುಕೆರೆ ಮಠವನ್ನು ಅಭಿವೃದ್ಧಿಗೊಳಿಸುವ ಪ್ರಯತ್ನ ಮಾಡಿದರು. ಸಿದ್ಧಗಂಗೆಯಲ್ಲಿದ್ದ ವಟುಗಳಿಗೆ ಸಂಸ್ಕೃತವನ್ನೇಕೆ ಕಲಿಸಬಾರದೆಂದು ಆಲೋಚಿಸಿ ತಮ್ಮ ಬಳಿಯಲ್ಲಿದ್ದ ಕಾಶಿಯಲ್ಲಿ ಅಧ್ಯಯನ ಮಾಡಿ ಪ್ರಕಾಂಡಪಂಡಿತರೆನಿಸಿದ ಮತಕೂರು ನಂಜುಂಡ ಶಿವಯೋಗಿಗಳ ಸಲಹೆ ಪಡೆದು ಅಟವೀಸ್ವಾಮಿಗಳು ಮಠದಲ್ಲಿ ಸಂಸ್ಕೃತ ವೇದ ಪಾಠಶಾಲೆಯನ್ನು ಆರಂಭಿಸಿದರು. ಮತಕೂರು ನಂಜುಂಡ ಶಿವಯೋಗಿಗಳು ಅಟವೀಸ್ವಾಮಿಗಳು ಆರಂಭಿಸಿದ ಸಂಸ್ಕೃತ ವೇದಪಾಠಶಾಲೆಯಲ್ಲಿ ಅಧ್ಯಾಪಕರಾಗಿ ಸೇವೆ ಸಲ್ಲಿಸಿದರು. ಅಟವೀಸ್ವಾಮಿಗಳ ಪರಮಶಿಷ್ಯರಾದ ಉದ್ದಾನ ಶಿವಯೋಗಿಗಳು ೧೯೧೭ರಲ್ಲಿ ಪಾಠಶಾಲೆಯನ್ನು ಶ್ರೀ ಸಿದ್ಧಲಿಂಗೇಶ್ವರ ವೇದ ಸಂಸ್ಕೃತ ಪಾಠಶಾಲೆಯೆಂದು ಕರೆದು ಎಲ್ಲರಿಗೂ ಉಚಿತವಾಗಿ ಸಂಸ್ಕೃತ ಕಲಿಸುವ ಪರಂಪರೆಗೆ ಅಸ್ತಿಭಾರ ಹಾಕಿದರು.

ಸಿದ್ಧಗಂಗೆಯ ಇಂದಿನ ಸೇವಾ ದಾಸೋಹಕ್ಕೆ 'ತವನಿಧಿ' ಯಾಗಿರುವ ಪರಮಪೂಜ್ಯ ಅಟವೀಸ್ವಾಮಿಗಳವರು ಜ್ಯೋತಿಸ್ವರೂಪಿಗಳು, ಉತ್ತರ ಕರ್ನಾಟಕದಿಂದ ಗುಬ್ಬಿಗೆ ದಯಮಾಡಿ ತೊರೆಯಮಠವನ್ನು ಸ್ಥಾಪಿಸಿದುದರ ಜೊತೆಗೆ ಗೋಸಲ ಚನ್ನಬಸವೇಶ್ವರರ ಕ್ಷೇತ್ರವನ್ನು ಬೆಳಗಿಸಿದ ನಂತರ ಶ್ರೀ ಸಿದ್ಧಗಂಗಾ ಕ್ಷೇತ್ರದಲ್ಲಿ ತಪಸ್ಸು ಮಾಡುತ್ತಾ ತಪಸ್ಸಿನ ಸಿದ್ಧಿಯನ್ನು ಶ್ರೀ ಉದ್ದಾನ ಶಿವಯೋಗಿಗಳವರಿಗೆ ಧಾರೆಯೆರೆದುದಲ್ಲದೆ ಶ್ರೀ ಸಿದ್ಧಗಂಗಾ ಕ್ಷೇತ್ರದಲ್ಲಿಂದು ಹಾಕಿದ ದಾಸೋಹದ ಒಲೆ ಅದು ಎಂದೆಂದಿಗೂ ಆರದಿರಲಿ ಎಂದು ಆಶೀರ್ವದಿಸಿ ಉದ್ದಾನಪ್ಪನವರನ್ನು ಉತ್ತರಾಧಿಕಾರಿಗಳನ್ನಾಗಿ ನೇಮಿಸಿಬಿಟ್ಟರು.

ಶ್ರೀ ಅಟವೀಸ್ವಾಮಿಗಳು ಆಶ್ವೀಜಮಾಸದಲ್ಲಿ ಶ್ರೀ ಸಿದ್ಧಲಿಂಗೇಶ್ವರ ಜಾತ್ರೆ ನಡೆಸುತ್ತಿದ್ದರೆಂದು ತಿಳಿದು ಬಂದರೆ ಶ್ರೀ ಉದ್ದಾನ ಶಿವಯೋಗಿಗಳವರು ಶಿವರಾತ್ರಿ ಕಾಲದಲ್ಲಿ ಜಾತ್ರೆ ನಡೆಯಿಸುವ ಸಂಪ್ರದಾಯ ರೂಢಿಗೆ ತಂದಿರುತ್ತಾರೆ.

ಅಟವೀಶ, ಅಡವೀಶ, ಅಡವೀ ಸಿದ್ಧೇಶ್ವರ, ಅಡವೀಶ್ವರ ಎಂಬ ಹೆಸರುಗಳಿಂದ ಕರೆಯುತ್ತಿದ್ದ ಅಟವೀ ಶಿವಯೋಗಿಗಳನ್ನು ಮತಕೂರು ನಂಜುಂಡ ಶಿವಯೋಗಿಗಳವರು ತಮ್ಮ ಕೃತಿಯಾದ 'ಶ್ರೀ ಮದಟವೀಶ ಚರಿತ್ರೆ'ಯಲ್ಲಿ ಈ ರೀತಿ ಭಕ್ತಿಯಿಂದ ಸ್ತುತಿಸಿದ್ದಾರೆ.

*ಜಯ ಗುರುವರ ಜಯಗುರುವರ*  
*ಜಯಕಾರುಣ್ಯ ನಿಧಿ*  
*ನಿತ್ಯಾನಂದ ಸುಶೀಲಾ, ನಿರತಾಶ್ರಿತ ಜನಪಾಲ*  
*ಶಾಂತಾಕಾರ ಮಹೇಶ, ಜನನಮಯ ಭಯನಾಶ*  
*ಸತ್ಯಾಚಾರ ಧುರೀಣ, ಸದಮಲ ಗುಣಮಣಿಹಾರ*  
*ಅಟವೀಶ ಸುಖಸಾಂದ್ರ, ಪಟುಧುರಿತೇಭಮೃಗೇಂದ್ರ*

ಶ್ರೀ ಮದಟವೀಶ್ವರರದು ಎತ್ತರವಾದ ನಿಲವು, ಅದಕ್ಕೆ ತಕ್ಕ ಅಂಗಸೌಷ್ಟವ, ಕೋಲುಮುಖ, ತಲೆಯಮೇಲೆ ಕಾವಿಬಣ್ಣದ ರುಮಾಲು, ತೆಳುನಗೆಮುಖ, ಭಸ್ಮಭೂಷಿತ ನೊಸಲು, ರುಮಾಲಿನ ಮಧ್ಯದಲ್ಲಿ ನೊಸಲಿನಿಂದ ಇಣುಕುವ ರುದ್ರಾಕ್ಷಿ, ಶ್ವೇತಗಡ್ಡದಾರಿ ಕೊರಳಲ್ಲಿ ಇಳಿಬಿಟ್ಟಿರುವ ದಪ್ಪನೆಯ ಹಾಗೂ ಚಿಕ್ಕ ರುದ್ರಾಕ್ಷಿಮಾಲೆ, ಕೊರಳಿಗೆ ತಾಕುವಂತೆ ಕಟ್ಟಿದ ಮೂರು ರುದ್ರಾಕ್ಷಿಮಾಲೆ, ಎದೆಯ ಮೇಲೆ ಕರಡಿಗೆ, ಪದ್ಮಾಸನಾರೂಢ, ಅಭಯ ಹಸ್ತ, ದಂಡ, ಕಾವಿ ವಸ್ತ್ರಧಾರಿ.

ಅಟವೀಸ್ವಾಮಿಗಳು ವಿರಕ್ತ ಪರಂಪರೆಗೆ ಸೇರಿದ್ದರೂ ಗುರುಪೀಠದ ಶಿಷ್ಯರೊಂದಿಗೆ ಉತ್ತಮವಾದ ಭಾಂದವ್ಯವನ್ನು ಇಟ್ಟುಕೊಂಡು ಗುರುವಿರಕ್ತರಲ್ಲಿ ಸಮನ್ವಯತೆಯನ್ನು ಸಾಧಿಸಲು ಶ್ರಮಿಸಿದರು.

ಅಟವೀಸ್ವಾಮಿಗಳು ಇತಿಹಾಸ ಪ್ರಸಿದ್ಧರು. ಈ ನೆಲ, ಜಲ ಮತ್ತು ಜನಮನವನ್ನು ತಮ್ಮ ಆಧ್ಯಾತ್ಮಿಕ ನಿಲುವು ಮತ್ತು ಯೌಗಿಕ ಶಕ್ತಿಯಿಂದ ಪಾವನಗೊಳಿಸಿದರು. ಸಿದ್ಧಗಂಗೆಯಲ್ಲಿ ದಾಸೋಹ ಸಂಸ್ಕೃತಿಗೆ ಕಾರಣರಾದವರು. ವಿಶೇಷವಾಗಿ ವೀರಶೈವ ಆಚಾರವಿಚಾರಗಳನ್ನು ಪುನರುಜ್ಜೀವನಗೊಳಿಸಿದವರು. ದೇಶ ಸಂಚಾರ ಮಾಡಿ ಕೊನೆಗೆ ತುಮಕೂರು ಜಿಲ್ಲೆಯ ಚಿಕ್ಕತೊಟ್ಲಕೆರೆಯಲ್ಲಿ ಸಮಾಧಿಸ್ಥರಾದರು. ಅಭಿನವ ಅಲ್ಲಮನಾಗಿ ಜಗದಲ್ಲಿ ಸುಳಿದ ಮಹಾಜಂಗಮ ಪುಂಗವ ಯತಿವರೇಣ್ಯ ಅಟವೀಶಮಹಾಪ್ರಭು, ಪಂಚಭೂತ ಕಾಯವಳಿದರೂ, ಪಂಚಾಕ್ಷರ ಮಂತ್ರ ಸ್ವರೂಪರಾಗಿ, ವಿಭೂತಿಪುರುಷರಾಗಿ ಸಜ್ಜನ ಸದ್ಭಕ್ತರಲ್ಲಿ ಶಿವಬೆಳಗಾಗಿ ಉಳಿದ ಆ ದಯಾಮೂರ್ತಿಗೆ ಶರಣು ಶರಣಾರ್ಥಿಗಳು.

❖







# ಶ್ರೀ ಉದ್ದಾನ ಶಿವಯೋಗಿಗಳು

–ರಾಜಶೇಖರಯ್ಯ *



**ಭಾ**ರತದ ಪವಿತ್ರ ಸ್ಥಳಗಳಲ್ಲಿ ಶ್ರೀ ಸಿದ್ಧಗಂಗಾ ಕ್ಷೇತ್ರವೂ ಒಂದಾಗಿದೆ. ಸಿದ್ಧರ ಪಾದಸ್ಪರ್ಶದಿಂದ ಉದ್ಭವವಾದ ಸಿದ್ಧಗಂಗೆಯ ಶುದ್ಧಗಂಗೆ ಸಮಸ್ತ ಕೋಮಿನ ಭಾವೈಕ್ಯತೆಯನ್ನು ಒಂದುಗೂಡಿಸಿರುವ ಮಹಾಕೇಂದ್ರ. ಧಾರ್ಮಿಕ ಹಾಗೂ ಸಾಂಸ್ಕೃತಿಕ ಮೌಲ್ಯಗಳ ಪವಿತ್ರ ಸ್ಥಳ. ವೀರಶೈವ ಮಹಾ ದಾಸೋಹದ ಕೇಂದ್ರ. ಮಾನವ ಸಂಸ್ಕೃತಿಯನ್ನು ಗೌರವಿಸಿ, ನವಭಾರತ ನಿರ್ಮಾಣದಲ್ಲಿ ಅವಿರತ ಶ್ರಮಿಸುತ್ತಿರುವ ತ್ರಿವಿಧ ದಾಸೋಹದ ಸ್ಥಳ. ಕಾಯಕವೇ ಕೈಲಾಸವೆಂಬ ನುಡಿಯನ್ನು ಆಚರಣೆಗೆ ತಂದು ತಾನೇ ಆಚರಿಸಿದ ಪವಿತ್ರ ಕ್ಷೇತ್ರ. **'ಸಕಲ ಜೀವಾತ್ಮರಿಗೆ ಲೇಸನ್ನು ಬಯಸುವ'** ಈ ಬಯಕೆಯನ್ನು ತಲೆಯ ಮೇಲೆ ಹೊತ್ತು ಶ್ರಮಿಸುತ್ತಿರುವ ಪುಣ್ಯ ಸ್ಥಳ. **'ಸರ್ವೇಜನಾಃ ಸುಖಿನೋ ಭವಂತು'** ಎಂಬ ಪ್ರಾಚೀನ ಭಾರತೀಯ ಧರ್ಮದ್ರಷ್ಟಾರರ ಉಕ್ತಿ ಕಾರ್ಯರೂಪಕ್ಕೆ ಬಂದಿರುವ ಪವಿತ್ರ ಭೂಮಿ ಶ್ರೀ ಸಿದ್ಧಗಂಗೆ. ಮಠದ ಅಭಿವೃದ್ಧಿ, ಲೋಕೋದ್ಧಾರ, ಸರ್ವ ಜನಾಂಗದ ಆತಿಥ್ಯ, ಬಡಮಕ್ಕಳ ಪೋಷಣೆಯ ಭಾರ, ಸತ್ವಭರಿತ ಉಪದೇಶಗಳ ಮಾರ್ಗದರ್ಶನ ಇತ್ಯಾದಿ ಲೋಕ ಕಲ್ಯಾಣ ಕಾರ್ಯಗಳನ್ನು ವ್ಯವಸ್ಥಿತವಾಗಿ ಜಾರಿಗೆ ತಂದು, ತಾನೇ ಆಚರಿಸಿ, ಇತರರೂ ಆಚರಿಸುವಂತೆ ದಾರಿ ತೋರುವ ಮಹಾಕೇಂದ್ರ. ನೊಂದವರು, ಬಡಜನರು, ಸುಖ, ಸಂತೋಷ, ನೆಮ್ಮದಿ ರಹಿತರು ಇತ್ಯಾದಿ ಜನರು ಆತ್ಮಸಂತೋಷ ಪಡೆದಿರುವ ಶಕ್ತಿಯುತ ಪವಿತ್ರ ಕ್ಷೇತ್ರ ಶ್ರೀ ಸಿದ್ಧಗಂಗೆ.

ಹರದನಹಳ್ಳಿ ನಿರಂಜನ ಜಗದ್ಗುರು ಪೀಠಾಚಾರ್ಯರಾದ ಶ್ರೀ ಗೋಸಲಸಿದ್ಧೇಶ್ವರರು ಕ್ರಿ.ಶ. ೧೩೦೦–೧೩೫೦ರಲ್ಲಿ ಪ್ರಥಮಥಃ ಶ್ರೀ ಸಿದ್ಧಗಂಗಾ ಕ್ಷೇತ್ರದಲ್ಲಿ ಮಠವನ್ನು ಸ್ಥಾಪಿಸಿದರು. ಈಗಿರುವ ಹಳೆಯ ಮಠ ಒಂಭತ್ತು ಕಂಬಗಳ ಪ್ರಾಂಗಣವು ಪ್ರಾಚೀನ ವಾಸ್ತುಶಿಲ್ಪ ರೀತಿಯ ಕಟ್ಟಡದ ಮಾದರಿಯನ್ನು ಇಂದಿಗೂ ನೋಡಬಹುದು. ನಂತರ ಹರದನಹಳ್ಳಿ ಶಂಕರಾಚಾರ್ಯಸ್ವಾಮಿಗಳೂ, ಗೋಸಲ ಚನ್ನಬಸವರಾಜೇಂದ್ರ ಸ್ವಾಮಿಗಳು, ತೋಂಟದ ಶ್ರೀ ಸಿದ್ಧಲಿಂಗೇಶ್ವರರು ಮೊದಲಾದವರು ಇಲ್ಲಿ ತಪೋನುಷ್ಠಾನ ಮಾಡಿದರು. ಮುಪ್ಪಿನಾರ್ಯರು, ರುದ್ರಸ್ವಾಮಿಗಳು, ಸಿದ್ಧಲಿಂಗ ಸ್ವಾಮಿಗಳು, ಅಡವಿಸ್ವಾಮಿಗಳು, ಶ್ರೀ ಉದ್ದಾನ ಶಿವಯೋಗಿಗಳು ಈ ಕ್ಷೇತ್ರದ ಧಾರ್ಮಿಕ ಪರಂಪರೆಗೆ ಶ್ರಮಿಸಿದ್ದಾರೆ. ಪ್ರಸ್ತುತ ನಡೆದಾಡುವ ದೇವರಾದ ಪರಮಪೂಜ್ಯ ಡಾ॥ ಶ್ರೀ ಶ್ರೀ ಶಿವಕುಮಾರಮಹಾಸ್ವಾಮಿಗಳು ಶ್ರೀಮಠದ ಸರ್ವಾಂಗೀಣ ಅಭಿವೃದ್ಧಿ ಕೈಗೊಂಡು ಮಠದ ಕೀರ್ತಿಯನ್ನು ವಿಶ್ವದಾದ್ಯಂತ ವಿಸ್ತರಿಸಿದ್ದಾರೆ.

## ಶ್ರೀ ಉದ್ದಾನ ಶಿವಯೋಗಿಗಳು

*ಶಿವಯೋಗಿಯು ಸುಳಿದ ಸುಳುಹು ಜಗತ್ಪಾವನ*  
*ಮೆಟ್ಟಿದ ಧರೆಯೆಲ್ಲ ಪವಿತ್ರ*  
*ನಿಮಿಷಾರ್ಧವಿದ್ದ ಸ್ಥಲವೆಲ್ಲ ಅವಿಮುಕ್ತ ಕ್ಷೇತ್ರ*  
*ಏರಿದ ಜಲವೆಲ್ಲ ಪುಣ್ಯತೀರ್ಥ*  
*ಏರಿದ ಬೆಟ್ಟವೆಲ್ಲ ಶಿವಪರ್ವತ*  
*ಕೃಪೆಯಿಂದ ನೋಡಿದ ಜನರೆಲ್ಲ ಸಾಲೋಕ್ಯರು*  
*ಒಡನೆ ಸಂಭಾಷಿಸಿದವರೆಲ್ಲ ಸದ್ಯೋನ್ಮುಕ್ತರು*  
*ನಿಜಗುರು ಸ್ವತಂತ್ರ ಸಿದ್ಧಲಿಂಗೇಶ್ವರಾ*

* ನಿವೃತ್ತ ಪ್ರಾಂಶುಪಾಲರು, ನಂ. 1128, 36ನೇ ಕ್ರಾಸ್, ಎಸ್.ಐ.ಟಿ. ಮುಖ್ಯರಸ್ತೆ, ತುಮಕೂರು–572 102.

ಶ್ರೀ ಉದ್ದಾನ ಶಿವಯೋಗಿಗಳ ಪೂರ್ವಾಶ್ರಮದ ಹೆಸರು ರುದ್ರಪ್ಪ. ತಂದೆಯ ಹೆಸರು ಗಟ್ಟಿಪ್ಪ. ತಾಯಿ ಮರುಳಸಿದ್ಧಮ್ಮ. ಸ್ಥಳ ಡಾಬಸ್‌ಪೇಟೆಗೆ ಸಮೀಪವಿರುವ ಲಕ್ಕೂರು (ನೆಲಮಂಗಲ ತಾ॥ ಬೆಂಗಳೂರು ಗ್ರಾ.ಜಿಲ್ಲೆ.) ರುದ್ರಪ್ಪನವರಿಗೆ ಐದುಜನ ಅಣ್ಣಂದಿರು, ನಾಲ್ವರು ಸಹೋದರಿಯರು, ಕಾಯಕ ಬೇಸಾಯ. ಈ ಸದ್ಭಕ್ತ ಕುಟುಂಬದಲ್ಲಿ ಮನೆ ತುಂಬಾ ದನಕರುಗಳು. ದುಡಿಯುವ ಮಕ್ಕಳಿದ್ದು ಗುರುಲಿಂಗ ಜಂಗಮ ಸೇವಾ ಮನೋಭಾವಗಳೊಡನೆ ತುಂಬಿ ತುಳುಕುತ್ತಿತ್ತು. ಒಮ್ಮೆ ಇವರ ಮನೆಗೆ ಮಹಾಜಂಗಮ ಮೂರ್ತಿಗಳೊಬ್ಬರು ಬಂದು ಆತಿಥ್ಯ ಸ್ವೀಕರಿಸಿ, ಪೂಜಾ ಪ್ರಸಾದಗಳಾದ ಮೇಲೆ, ಸುಮಾರು ೧೪-೧೫ ವರ್ಷದ ರುದ್ರಪ್ಪ ಜಂಗಮರಿಗೆ ನಮಸ್ಕರಿಸಿದರು. ಶ್ರೀಗಳು ದಟ್ಟ ದಿಟ್ಟ ದೃಷ್ಟಿಯಿಂದ ನೋಡಿದರು. ಆಗ ಗಟ್ಟೆಪ್ಪನವರು- ಬುದ್ಧಿ ಈತನೇ ನನ್ನ ಕಿರಿಯ ಮಗ, ಬಲು ತುಂಟ, ಸ್ವತಂತ್ರ ಮನೋಭಾವ ದವ, ಯಾರೂ ಏನೂ ಹೇಳು ವಂತಿಲ್ಲ. ಅಗೋ ಅಲ್ಲಿ ಕಾಣುವ ಸಿದ್ಧರ ಬೆಟ್ಟದ ಗುಹೆ ಗಹ್ವರಗಳು ಈತನ ತಂಗು ದಾಣಗಳು. ಈತನಿಗೆ ಒಳ್ಳೆ ಗುಣಗಳು ಬರುವಂತೆ ದಯ ಮಾಡಿ ಆಶೀರ್ವದಿಸಿ ಎಂದು ಕೇಳಿಕೊಂಡರು. ಆಗ ಸ್ವಾಮಿಗಳು ಕ್ಷಣಕಾಲ ದೃಷ್ಟಿಸಿ- 'ಈತ ನಿಮ್ಮ ಮಗನಾಗಿ ರುವುದು ನಿಮಿತ್ತ ಮಾತ್ರ' ಇವರಿಗೆ ಉಜ್ವಲ ಭವಿಷ್ಯವಿದೆ. ಅಸಾಧಾರಣ ತೇಜಸ್ವಿಯಾದ ಇವರಿಗೆ ನಾವು ಆಶೀರ್ವದಿಸುವುದೇನಿದೆ ಎಂದರು. ನಂತರ ಈ ಹುಡುಗನಿಗೆ ಬಾಳೆ ಹಣ್ಣೊಂದನ್ನು ನೀಡಿದರು. ತಿಂದ ಮೇಲೆ ಆಶೀರ್ವದಿಸಿದರು. ಹೊರಡಲನುವಾದ ಶ್ರೀಗಳಿಗೆ ರುದ್ರಪ್ಪ ಮತ್ತೊಮ್ಮೆ ನಮಸ್ಕರಿಸಿ, ಅವರಲ್ಲಿದ್ದ ಪುಸ್ತಕವನ್ನು ಕೇಳಿದರು. ಆಗ ಸ್ವಾಮಿಗಳು ತಮ್ಮ ಪುಸ್ತಕವನ್ನು ಕೊಡುತ್ತ, ಇದರಲ್ಲಿರು ವಂತೆ ನಡೆಯಬೇಕೆಂದು ಷರತ್ತು ಹಾಕಿದರು. ಆದೇ ರೀತಿ ಪುಸ್ತಕ ಓದಿ, ಕೊಟ್ಟಮಾತಿನಂತೆ ನಡೆದರು.

ಲಕ್ಕೂರಿನ ಗಟ್ಟೆಪ್ಪನವರು, ಆ ಊರಿನ ಪಟೇಲರು. ನೂರಾರು ಎಕರೆ ಜಮೀನು, ೨೦೦ಕ್ಕೂ ಅಧಿಕ ಕುರಿ ಮೇಕೆಗಳು, ನೂರಾರು ದನಗಳು. ಖಂಡುಗ ಖಂಡುಗ ದವಸ ಧಾನ್ಯಗಳ ಕಣಜಗಳು, ದಿನಂಪ್ರತಿ ಗುರುಜಂಗಮರ ದಾಸೋಹ. ಶ್ರಾವಣ ಮತ್ತು ಮಹಾನವಮಿಯಲ್ಲಿ ಧರ್ಮ ಗ್ರಂಥ ಪಠಣೆ, ನಂತರ ಅದ್ದೂರಿ ಅನ್ನಸಂತರ್ಪಣೆ. ಈ ರೀತಿಯ ಸತ್‌ಸಂಪ್ರದಾಯ ಕುಟುಂಬದ ರುದ್ರಪ್ಪನ ಕಾಯಕ ಮೇಕೆ ಮೇಯಿಸುವುದು. ಗುರುಗಳು ಕೊಟ್ಟಿದ್ದ ಪುಸ್ತಕವನ್ನೋದಿದ ರುದ್ರಪ್ಪ ಒಂದು ಮೇಕೆಯನ್ನು ಮಾರಿ, ಬಂದ ಹಣದಿಂದ ಗುಂಡಿಗೆರೆಗೆ ಹೋಗಿ, ಅಲ್ಲಿಯ ಸಮೀಪದ ಮಠದಲ್ಲಿ ಶಿವದೀಕ್ಷಾ ಸಂಸ್ಕಾರ ಪಡೆದರು. ಅಂದಿನಿಂದ ಇವರ ಪೂಜಾನಿಷ್ಠೆ, ಸೇವಾಮನೋಭಾವ ಅಧಿಕಗೊಂಡವು. ಕಾಡಲ್ಲಿ ಸಿಗುವ ಹೂಪತ್ರೆ ತಂದು ಶಿವಪೂಜೆಯಲ್ಲಿ ತಲ್ಲೀನರಾದರು. ಎಷ್ಟೋ ವೇಳೆ ಮನೆಗೆ ಹೋಗದೆ ಹಸಿವಾದಾಗ ಬಿಲ್ವಪತ್ರೆಯನ್ನೇ ಆಹಾರವಾಗಿ ಸ್ವೀಕರಿಸಿದರು. ಸ್ನಾನಪೂಜೆಯಿಲ್ಲದೆ ಎಂದೂ ಆಹಾರ ಸೇವಿಸುತ್ತಿರಲಿಲ್ಲ. ಭಸ್ಮ, ಬಿಲ್ವಪತ್ರೆ ಸಕ್ಕರೆಯ ಪೊಟ್ಟಣ ಯಾವಾಗಲೂ ತಮ್ಮ ಜೋಳಿಗೆಯಲ್ಲಿರುತ್ತಿದ್ದವು. ಸಕ್ಕರೆ ಯನ್ನು ಇರುವೆ ಗೂಡಿನ ಸುತ್ತಲೂ ಹಾಕುತ್ತಿದ್ದರು. ಒಮ್ಮೊಮ್ಮೆ ಉದ್ದಾನ ವೀರಭದ್ರನ ಗುಡಿಯಲ್ಲಿ ವೀರಭದ್ರ ನಂತೆ ಕುಣಿದು ಕುಪ್ಪಳಿಸಿ ಸ್ನೇಹಿತರನ್ನು ನಗಿಸುತ್ತಿದ್ದರು. ಚಿತ್ರವಿಚಿತ್ರವಾಗಿ ವರ್ತಿಸುತ್ತಿದ್ದರು. ಆದರೆ ಇವರ ಮೇಕೆಗಳು ತಮ್ಮಿಷ್ಟದಂತೆ ಮೇದು ರುದ್ರಪ್ಪನಿರುವ ಜಾಗಕ್ಕೆ ಬರುತ್ತಿದ್ದವು. (ಸೋಂಪುರ) ದಾಬಸ್‌ಪೇಟೆಯಕೂಲಿಮಠದಲ್ಲಿ ಅಲ್ಪಸ್ವಲ್ಪ ಓದಿದ್ದರಿಂದ, ಸ್ವಪ್ರಯತ್ನ ಮಾಡಿ ಶ್ರೀಗಳು ಕೊಟ್ಟಿದ್ದ ಪುಸ್ತಕವನ್ನೋದಿ, ಅದರಂತೆ ನಡೆದು ದೈವಿಕ ಸಂಪ್ರದಾಯದಲ್ಲಿ ಪ್ರಭಾವಿತರಾದರು.

ಲೋಕದಲ್ಲಿ ಕೆಲವರು ದೊಡ್ಡವರಾಗಿ, ಮಹನೀಯ ರಾಗಿ ಹುಟ್ಟುತ್ತಾರೆ. ಮತ್ತೆ ಕೆಲವರು ಹುಟ್ಟಿದ ಮೇಲೆ ದೊಡ್ಡವರಾಗಿ, ಮಹನೀಯರಾಗಿ ಆಗುತ್ತಾರೆ. ಆದರೆ ರುದ್ರಪ್ಪನವರು ಹುಟ್ಟಿದೊಡನೆಯೇ ದೊಡ್ಡತನವನ್ನು, ಮಹನೀಯತೆಯನ್ನು, ಮೈಮನಕ್ಕಂಟಿಸಿಕೊಂಡು ಆಚರಿಸಿದ ದಿವ್ಯಚೇತನ. ಇವರಿಗೆ ಬಾಲ್ಯದಲ್ಲಿಯೇ ಅಹಿಂಸೆ, ತ್ರಿಕರಣ ಶುದ್ಧಿಯಿತ್ತು. ಪಟೇಲ್ ಗಟ್ಟೆಪ್ಪನವರಿಗೆ ಉದ್ದಾನ ವೀರಭದ್ರ ಮನೆ ದೇವರಾದರೆ, ರುದ್ರಪ್ಪನವರಿಗೆ ಮನದೇವರಾಯಿತು. ಆಗಾಗ್ಯೆ ವೀರಭದ್ರನ ಗುಡಿಯಲ್ಲಿ ಮೈಮರೆತು ಧ್ಯಾನಿಸುತ್ತಿದ್ದರು. ಅಲ್ಲಿಯ ಸಿದ್ಧಗಿರಿ ಬೆಟ್ಟದ ನೆತ್ತಿಯನ್ನೇರಿ ಸ್ಪಷ್ಟವಾಗಿ ಕಾಣುತ್ತಿದ್ದ ಶಿವಗಂಗೆ, ಸಿದ್ಧಗಂಗೆ ಮತ್ತು ರಾಮೇ ದೇವರ ಬೆಟ್ಟಗಳನ್ನು ಎವೆಯಿಕ್ಕದೆ ದೃಷ್ಟಿಸಿ ಮಹದಾನಂದ, ಮನದಾನಂದ ಪಡೆಯುತ್ತಿದ್ದರು. ಒಮ್ಮೊಮ್ಮೆ ಸಿದ್ಧಗಂಗಾ ಬೆಟ್ಟದಿಂದ ಯಾವುದೋ ಒಂದು ಶಕ್ತಿ ಕೈಬೀಸಿ ಕರೆಯುತ್ತಿದೆ





ಎಂದು ಹಗಲು ಕನಸು ಕಾಣುತ್ತಿದ್ದರು. ಹೀಗಿರುವಾಗ ತನ್ನ ಅದೃಷ್ಟವೋ ಏನೋ ಒಬ್ಬ ದಿವ್ಯ ಪುರುಷನ ದರ್ಶನ ಮತ್ತು ಸಂಪರ್ಕದಿಂದ ಮಂತ್ರ, ತಂತ್ರ, ಭೂತ ಬಾಧಾ ನಿವಾರಣಾದಿ ವಿದ್ಯೆಗಳನ್ನು ಕಲಿತರು. ಕಾಕತಾಳೀಯ ವೆಂಬಂತೆ ಒಂದು ತೋಳ ತನ್ನ ಮೇಕೆ ಹಿಂಡಿನ ಮೇಲೆರಗಿ, ಮೇಕೆ ತಿನ್ನಲು ಬಾಯ್ತೆರೆಯಿತು. ರುದ್ರಪ್ಪನವರು ಅತ್ತ ದೃಷ್ಟಿ ಹಾಯಿಸಿದರು. ತೋಳ ತೆರೆದ ಬಾಯನ್ನು ಬಿಟ್ಟು ಕೊಂಡು ಓಟ ಹಾಕಿತು. ಇದನ್ನೆಲ್ಲಾ ನೋಡಿದ ಅವರ ಸ್ನೇಹಿತರು ಅವಾಕ್ಕಾದರು. ತೋಳವನ್ನು ಹೊಡೆ ದೋಡಿಸಲಿಲ್ಲ. ಅಂದಿನಿಂದ ಅವರಿಗೆ ರುದ್ರಪ್ಪನೆಂದರೆ ಪಂಚಪ್ರಾಣ.

ಒಮ್ಮೆ ರುದ್ರಪ್ಪ ಗೊಬ್ಬರದ ಗಾಡಿ ಹೂಡುವಾಗ ಎತ್ತುಗಳನ್ನು ಸರಿಯಾಗಿ ನಿಲ್ಲಿಸದೆ, ಹೊರಭಾಗದಿಂದ ಜತ್ತಿಗೆಯನ್ನು ಹಾಕಿದರು. ಕುಪಿತಗೊಂಡ ಆತನ ಅಣ್ಣಂದಿರು ರುದ್ರಪ್ಪನ ಕೆನ್ನೆಗೆ ಬಾಸುಂಡೆ ಬರುವ ಹಾಗೆ ಬಾರಿಸಿದರು. ಕೈಬೆರಳುಗಳ ಮುದ್ರೆ ಕೆನ್ನೆಯಲ್ಲಿ ಕಾಣಿಸಿತು. ಇಷ್ಟಾದರೂ ಅವರು ಏನು ಮಾತನಾಡಲಿಲ್ಲ. ನೋವು ಸಹಿಸಿಕೊಂಡು ಕರ್ತವ್ಯ ನಿರ್ವಹಿಸಿದರು. ರುದ್ರಪ್ಪನಿಗೆ ಹಣ ಬೇಕಾದಾ ಗಲೆಲ್ಲಾ ಒಂದೊಂದು ಮೇಕೆ ಮಾರುತ್ತಿದ್ದರು. ಒಮ್ಮೆ ಎರಡು ರೂ.ಗೆ ಒಂದು ದೊಡ್ಡ ಮೇಕೆ ಮಾರಿ, ಕರ್ಪೂರ, ಊದುಬತ್ತಿ, ಭಸ್ಮ, ಸಕ್ಕರೆ ಕೊಂಡರು. ಈ ವಿಷಯ ಅಣ್ಣಂದರಿಗೆ ಗೊತ್ತಾಗಿ ಬಲವಾದ ಏಟು ಕೊಟ್ಟರು. ಏಟು ತಿಂದ ರುದ್ರಪ್ಪ ಅಂದು ರಾತ್ರಿ ಮನೆಗೆ ಹೋಗದೆ, ನಿದ್ರೆಯೂ ಮಾಡದೆ, ತಾನಿದ್ದ ಜಾಗವನ್ನೇ ಬಿಡಲು ನಿರ್ಧರಿಸಿದರು. ಆದರೆ ಹೋಗುವುದು ಎಲ್ಲಿಗೆ? ಏನು ಮಾಡುವುದು? ಎಲ್ಲವನ್ನು ಮೊದಲೇ ನಿರ್ಧರಿಸಿದ್ದರು. ಈ ಘಟನೆ ತಾಯಿ ಯಾದ ಮರುಳಸಿದ್ಧಮ್ಮನವರಿಗೆ ಗೊತ್ತಾಗಿ ಮಮ್ಮಲ ಮರುಗಿದರು. ಮೇಕೆ ಮಾರಿದ್ದು ತಪ್ಪಿರಬಹುದು. ಐದು ಬೆರಳು ಹಸ್ತದಲ್ಲಿ ಸಮವಾಗಿರುತ್ತವೆಯೇ? ಎಂದು ಎಲ್ಲರನ್ನು ಪ್ರಶ್ನಿಸಿದಾಗ, ಎಲ್ಲರೂ ಪಶ್ಚಾತ್ತಾಪಪಟ್ಟು, ಅವರೂ ನಿದ್ರೆ ಮಾಡಲಿಲ್ಲ. ಬೆಳ್ಳಂ ಬೆಳಿಗ್ಗೆಯೇ ರುದ್ರಪ್ಪನ ಕ್ಷಮೆ ಕೇಳಬೇಕು ಎಂದು, ಬೆಳಕಾಗುವುದನ್ನು ಕಾಯುತ್ತಿದ್ದರು. ಇತ್ತ ತಾಯಿ ಮರುಳಸಿದ್ಧಮ್ಮ, ಈತ ಸರಿಹೋಗಬೇಕಾದರೆ, ಈತನಿಗೆ ಮದುವೆ ಮಾಡಬೇಕು. ಸಂಸಾರ ಬಂದ ಮೇಲೆ ಎಲ್ಲವೂ ಸರಿ ಹೋಗುತ್ತದೆಂದು ನಿರ್ಧರಿಸಿದರು. ಜೊತೆಗೆ ತನ್ನ ಮಗಳ ಮಗಳನ್ನೇ ತಂದುಕೊಳ್ಳಲು ಯೋಜನೆ ಹಾಕಿದರು.

ರುದ್ರಪ್ಪನವರು ಇರುವುದೆಲ್ಲವನ್ನೂ ಬಿಟ್ಟು ಸಿದ್ಧಗಂಗೆಯ ಕಡೆಗೆ ಹೊರಟರು. ರಾಮೇದೇವರಬೆಟ್ಟ, ಸಿದ್ಧಗಂಗೆ ಬೆಟ್ಟದಲ್ಲಿ ಸುತ್ತಾಡಿ, ಇತರೆ ಜನರು ನಮಸ್ಕರಿಸು ವಂತೆ ತಾವೂ ಅವರ ಸಾಲಿನಲ್ಲಿ ನಿಂತು ಶ್ರೀಸಿದ್ಧಗಂಗೆಯ ಶ್ರೀ ಅಡವಿಸ್ವಾಮಿಗಳವರಿಗೆ ನಮಸ್ಕರಿಸಿದರು. ಅಂದು ಅಲ್ಲಿಯೇ ಪ್ರಸಾದ ಸ್ವೀಕರಿಸಿದರು. ಮಾರನೇ ದಿನ ಮುಂಜಾನೆ ಎದ್ದು ಸ್ನಾನ, ಪೂಜೆ ಪೂರೈಸಿಕೊಂಡು ಶ್ರೀಸಿದ್ಧಲಿಂಗೇಶ್ವರರ ಕಟ್ಟೆಯ ಮೇಲೆ ಕುಳಿತಿದ್ದ ಭಸ್ಮಧಾರಿ, ಪರಶಿವನಂತೆ ಕಾಣುತ್ತಿದ್ದ ಅಡವಿಸ್ವಾಮಿಗಳವರಿಗೆ ನಮಸ್ಕಾರ ಹಾಕಿದರು. ನಮಸ್ಕಾರದಲ್ಲಿ ಏನೋ ಒಂದು ಹೊಸತನವಿತ್ತು. ಅಡವೀಶರು-ಯಾರು ನೀನು? ಯಾವ ಊರು? ಏನುಕೆಲಸ? ಏಕೆ ಬಂದೆ? ಎಂದು ಪ್ರಶ್ನಿಸಿದಾಗ, ರುದ್ರಪ್ಪನವರು ತಮ್ಮ ಪೂರ್ವೋತ್ತರಗಳನ್ನು ವಿವರವಾಗಿ ಒಪ್ಪಿಸಿದರು. ಕೊನೆಗೆ ಧೈರ್ಯ ಮಾಡಿ-ಇಲ್ಲೇ ಇರಲು ಬಂದಿರುವುದಾಗಿ ತಿಳಿಸಿದರು. ಆಗ ಅಡವೀಶರು-ಇಲ್ಲಿ ಸೋಮಾರಿಗಳಿಗೆ ಜಾಗವಿಲ್ಲ. ಬರೀ ಊಟಮಾಡಿಕೊಂಡಿ ರುವವರಿಗೆ ಸ್ಥಳವಿಲ್ಲ. ಕಷ್ಟಪಟ್ಟು ದುಡಿಯಬೇಕು. ಸೌದೆ, ಸೊಪ್ಪು, ವ್ಯವಸಾಯ, ನೆಲ ಅಗಿಯುವುದು, ಕಟ್ಟಡ ಕಟ್ಟು ವುದು ಇತ್ಯಾದಿ ಮಠದ ಕೆಲಸಗಳನ್ನು ಪ್ರಾಮಾಣಿಕವಾಗಿ ಮಾಡಬೇಕು. ಈ ಮಾತಿಗೆ ರುದ್ರಪ್ಪನವರು, ತಾವು ಪಾದದಲ್ಲಿ ತೋರಿಸಿದ ಕಾರ್ಯವನ್ನು ಪವಿತ್ರವೆಂದು ತಿಳಿದು ಮನಃಪೂರ್ವಕವಾಗಿ ಮಾಡುತ್ತೇನೆಂದು ಹೇಳಿದರು. ಎಲ್ಲವನ್ನು ತೊರೆದುಬಂದಿರುವ ನನಗೆ ಪೂಜೆ ಮತ್ತು ಪ್ರಸಾದವಾದರೆ ಸಾಕು. ಮತ್ತೆ ಏನನ್ನೂ ಬಯಸು ವುದಿಲ್ಲವೆಂದಾಗ ಅಡಿವೆಪ್ಪನವರು ಒಪ್ಪಿದರು.

ರುದ್ರಪ್ಪನವರ ದೈನಂದಿನ ದೈಹಿಕ ಶ್ರಮದ ಕೆಲಸಗಳು ಅಡಿವೆಪ್ಪನವರಿಗೆ ತೃಪ್ತಿ ತಂದವು. ಅವರ ತೇಜಸ್ಸು, ದೇಹ ರಚನೆ, ಮುಂದಾಳತ್ವ, ಸಹನೆ, ಪೂಜಾನಿಷ್ಠೆಯನ್ನು ಕಂಡು ಪ್ರಸನ್ನಚಿತ್ತರಾದರು. ಎಲ್ಲಾ ಕೆಲಸಗಳನ್ನು ತಾವು ಊಹಿಸಿ ದಂತೆ ಮಾಡುತ್ತಿದ್ದರು. ಎಷ್ಟೋ ವೇಳೆ ನಾನು ಈ ಕೆಲಸ ಇವರಿಗೆ ಹೇಳಿದ್ದೇನೋ ಅಥವಾ ಇಲ್ಲವೋ ಎಂಬ ಸಂಶಯ ಬರುತ್ತಿತ್ತು. ಕಾರಣ ಅಷ್ಟು ಚೆನ್ನಾಗಿ ಕಾಯಕ ದಾರಿಯಾಗಿದ್ದರು. ಒಮ್ಮೆಅಡಿಗೆ ಮನೆ ಕಾರ್ಯಕ್ಕೆ ಯಾರೂ

ಇರಲಿಲ್ಲ. ಧನುರ್ಮಾಸ ಬೇರೆ. ಏನು ಮಾಡುವುದು ಎಂಬ ಚಿಂತೆಯಲ್ಲಿದ್ದಾಗ, ರುದ್ರಪ್ಪನವರೇ ಬಾಣಸಿಗರಾದರು. ಅಚ್ಚುಕಟ್ಟಾಗಿ ಪ್ರಸಾದ ತಯಾರಿಸಿದರು. ಶಿವನಿಚ್ಛೆಯಂತೆ ಅಡವೀಶರು ರುದ್ರಪ್ಪ ನವರು ತಯಾರಿಸಿದ ಪ್ರಸಾದ ಸ್ವೀಕರಿಸಿದ ಮೇಲೆ ತಮಗಿದ್ದ ಗೂರಲು ಬೇನೆ ಪೂರ್ಣವಾಗಿ ವಾಸಿಯಾಯಿತು. ರುದ್ರಪ್ಪನವರು ಹಾಸನ ಜಿಲ್ಲೆ ತೋಟಗದ್ದೆ ಎಸ್ಟೇಟಿನ ಕಾಫಿ ಪ್ಲಾಂಟರ್ ಶ್ರೀ ದೇವಪ್ಪ ಗೌಡರಿಗೆ ಹಿಡಿದಿದ್ದ ಭೂತಚೇಷ್ಟೆಯನ್ನು ನಿವಾರಿಸಿದರು. ಇಂದಿಗೂ ದೇವಪ್ಪಗೌಡರ ವಂಶಸ್ಥರು ಮಠದ ಭಕ್ತರಾಗಿ ಸೇವೆ ಸಲ್ಲಿಸುತ್ತಿದ್ದಾರೆ.

ರುದ್ರಪ್ಪನವರ ತಾಯಿ ಮರುಳಸಿದ್ಧಮ್ಮನವರು ಕಾಡು ಮೇಡು ತಿರುಗಿ, ಎಲ್ಲೆಲ್ಲಿ ವಿಚಾರಿಸಿದರೂ ರುದ್ರಪ್ಪನವರ ಸುಳಿವು ಸಿಗಲಿಲ್ಲ. ಹೆತ್ತ ಹೊಟ್ಟೆ ಮಮ್ಮಲ ಮರುಗಿತು. ಕೊನೆಗೆ ಉದ್ದಾನ ವೀರಭದ್ರನ ಕರುಣೆಯಿಂದ ತಮ್ಮ ಮಗ ರುದ್ರಪ್ಪ ಶ್ರೀ ಸಿದ್ಧಗಂಗೆಯಲ್ಲಿರುವುದು ತಿಳಿಯಿತು. ಕ್ಷೇತ್ರಕ್ಕೆ ಬಂದು ಮಗನನ್ನೇನೋ ನೋಡಿದರು. ಆದರೆ ಅಡವಿಸ್ವಾಮಿಗಳ ವಿವರಣೆ, ರುದ್ರಪ್ಪನವರಿಗಿದ್ದ ಧ್ಯೇಯೋದ್ದೇಶಗಳನ್ನು ಕೇಳಿ ಬಾರದ ಹೃದಯ ಹೊತ್ತು ಲಕ್ಕೂರಿಗೆ ವಾಪಸ್ಸಾದರು. ಇತ್ತ ರುದ್ರಪ್ಪನವರು ದಿನೇ ದಿನೇ ಅಡವೀಶರ ಅಚ್ಚುಮೆಚ್ಚಿನ ಶಿಷ್ಯರಾದರು. ಮಠಕ್ಕೆ ತಕ್ಕ ವ್ಯಕ್ತಿಯಾದರು. ಭಕ್ತರಿಗೆ ಸರಿಯಾದ ಗುಣಗಳಿರುವ ಗುರುಸ್ಥಾನಕ್ಕೆ ಯೋಗ್ಯರಾಗಿದ್ದರು. ಇನ್ನು ತಡವೇಕೆ? ಅಡವಿಸ್ವಾಮಿಗಳ ದಿವ್ಯ ಶಿವಯೋಗಿ ಶಕ್ತಿಯ ಫಲವಾಗಿ ರುದ್ರಪ್ಪನವರು 'ಉದ್ದಾನ ಶಿವಯೋಗಿ' ಎಂಬ ನೂತನಾಭಿದಾನದಿಂದ ಹರದನಹಳ್ಳಿ ಶೂನ್ಯಪೀಠಾಧೀಶ್ವರರ ಪ್ರಾಚೀನ ತಪೋಭೂಮಿಯಾದ ಶ್ರೀ ಸಿದ್ಧಗಂಗಾ ಮಠಾಧಿಪತ್ಯವನ್ನು ವಹಿಸಿಕೊಂಡರು.

## ಸಿದ್ಧಗಂಗೆಯಲ್ಲಿ ಉದ್ದಾನ ಶಿವಯೋಗಿಗಳು

ಅಡವಿಸ್ವಾಮಿಗಳಿಂದ ಆಶೀರ್ವದಿಸಿಕೊಟ್ಟು ಒಂದು ರುದ್ರಾಕ್ಷಿಸರ ಮತ್ತು ಆಂಧ್ರದ ರೆಡ್ಡಿಯವರು ನೀಡಿದ ಐದು ನೂರು ರೂಗಳ ಸಂಪತ್ತು ಮಠದ ಆಸ್ತಿಯಾಗಿತ್ತು. ಇವೆರಡು ಶ್ರೀಗಳಿಗೆ ಆಧ್ಯಾತ್ಮಿಕ ಮತ್ತು ಸಾಮಾಜಿಕ ಸೇವೆಯ ಮೂಲವಸ್ತುಗಳು. ಅಷ್ಟೇನೂ ಓದಿರದ ಶ್ರೀಗಳ ಆಸೆಯೆಂದರೆ-'ಮಠಕ್ಕೆ ಜನ ಬರಬೇಕು. ತೃಪ್ತಿಯಾಗಿ ಊಟ ಮಾಡಬೇಕು. ವಿದ್ಯಾರ್ಥಿಗಳು ಸತ್‌ಶೀಲರಾಗಬೇಕು, ಬಾಳಬೇಕು ಮತ್ತು ವಿದ್ಯಾವಂತರಾಗಿ ಬೆಳಗಬೇಕು' ಚೆನ್ನಾಗಿ ಓದುವವರಿಗೆ ಕಲ್ಲುಸಕ್ಕರೆ, ಬಟ್ಟೆ, ಬರೆ ಕೊಡಿಸುತ್ತಿದ್ದರು. ಮಠದ ದಿನನಿತ್ಯದ ಖರ್ಚಿಗೆ ಜೋಳಿಗೆಯೇ ಬಲ. ಖರ್ಚು ದಿನೇ ದಿನೇ ಹೆಚ್ಚುತ್ತಿತ್ತು. ಆದರೆ ಅಡವೀಸ್ವಾಮಿಗಳ ಆಶೀರ್ವಾದ 'ಉದ್ದಾನಪ್ಪ, ಚಿಂತೆಯೆಂಬುದು ಶಿವಯೋಗಿಗುಂಟೆ? ನೀನು ಅಧೀರನಾಗಬೇಡ, ಸದಾನಿನ್ನ ಬೆಂಬಲಕ್ಕೆ ಇದ್ದೇ ಇದ್ದೇನೆ' ಎಂಬ ಮಾತುಗಳು ಶ್ರೀಗಳಿಗೆ ಧೈರ್ಯ ಕೊಟ್ಟು ಮುನ್ನುಗ್ಗಿಸುತ್ತಿದ್ದರು. ೧೯೦೫ರಲ್ಲಿ ಸಿದ್ಧಲಿಂಗೇಶ್ವರ ರಥೋತ್ಸವ, ದನಗಳ ಪರಿಷೆ ಪ್ರಾರಂಭಿಸಿ, ಬಂದ ಭಕ್ತಾದಿಗಳಿಗೆ ಆರೇಳು ಕಡೆ ಊಟಕ್ಕೆ ಕೊಪ್ಪಲು ಪ್ರಾರಂಭಿಸಿದರು. ಒಂದೊಂದು ಊರಿನವರು ಒಂದೊಂದು ಕೊಪ್ಪಲು ನಿರ್ವಹಣೆ ಮಾಡಿದರು. ಒಂದೊಂದು ವ್ಯವಸ್ಥಿತವಾಗಿ ನಡೆಸುತ್ತಿದ್ದರು. ಇಂದಿಗೂ ಇದೇ ರೀತಿ ಮುಂದುವರಿಯುತ್ತಿದೆ.

ಉದ್ದಾನೇಶ್ವರರು ನಿಷ್ಠುರವಾದಿಗಳು. ಕೋರ್ಟು ಕಛೇರಿಗಳಲ್ಲಿ ಬಗೆ ಹರಿಯದ ವ್ಯಾಜ್ಯಗಳನ್ನು ಭಕ್ತರ ಮನವಿ ಮೇರೆಗೆ ಉಭಯತ್ರಯರನ್ನು ಕರೆಸಿ ತಮ್ಮ ಸಮ್ಮುಖದಲ್ಲಿ ಬಗೆಹರಿಸುತ್ತಿದ್ದರು. ಶ್ರೀಗಳ ತೀರ್ಪೇ ಅಂತಿಮ. ಯಾರೂ ತುಟಿಪಿಟಕ್ ಎನ್ನದೆ ಸಂತೋಷದಿಂದ ಒಪ್ಪುತ್ತಿದ್ದರು. ಅಷ್ಟೇ ಅಲ್ಲ ಮಠದ ದಾಸೋಹದ ಒಂದೇ ಪಂಕ್ತಿಯಲ್ಲಿ ಪ್ರಸಾದ ಸ್ವೀಕರಿಸುತ್ತಿದ್ದರು. ಶ್ರೀಗಳ ಆಶೀರ್ವಾದದಿಂದ ಈರ್ವರೂ ವೈಷಮ್ಯ ಮರೆತು ಕೌಟುಂಬಿಕ ಉನ್ನತ ಸ್ಥಾನ ತಲುಪುತ್ತಿದ್ದರು. ಶ್ರೀ ಸಿದ್ಧಗಂಗಾ ಮಠವು ದಾಸೋಹ, ವ್ಯಾಜ್ಯಗಳ ಇತ್ಯರ್ಥ, ಬಡಮಕ್ಕಳ ವಿದ್ಯಾಭ್ಯಾಸಗಳಿಗೆ ಪ್ರಖ್ಯಾತಿ ಪಡೆಯಿತು. ಇದು ನಮ್ಮ ಮಠ ಎಂಬ ಭಾವನೆ ಭಕ್ತರಲ್ಲಿ ಉದಯಿಸಿತು. ತಾವು ಬೆಳೆದ ದವಸ ಧಾನ್ಯ ತರಕಾರಿ ಮತ್ತು ಮಠಕ್ಕೆ ಬೇಕಾದ ವಸ್ತುಗಳನ್ನು ಸ್ವಸಂತೋಷದಿಂದ ಭಕ್ತರೇ ತಂದೊಪ್ಪಿಸುತ್ತಿದ್ದರು. ಇಂದಿಗೂ ಈ ಕಾರ್ಯ ಮುಂದುವರಿಯುತ್ತಿದೆ. ಬಸವಣ್ಣನವರ ಪ್ರಕಾರ 'ದೇವನೊಬ್ಬ ನಾಮಹಲವು' ಇವನಾರವ, ಇವನಾರವ ಎನ್ನದೆ, ಇವನಮ್ಮವ, ಇವನಮ್ಮವ' ಎಂಬ ವಾಣಿಗಳು ಇಲ್ಲಿ ಚಾಲನೆಯಲ್ಲಿವೆ. ೧೯೧೭ರಲ್ಲಿ ಸ್ಥಾಪಿತವಾದ ಶ್ರೀ ಸಿದ್ಧಲಿಂಗೇಶ್ವರ ಸಂಸ್ಕೃತ ಮತ್ತು ವೇದ ಪಾಠಶಾಲೆಯು ಹಿಂದು, ಮುಸ್ಲಿಂ, ಕ್ರೈಸ್ತ ಇತ್ಯಾದಿ ಜನರು ಸಂಸ್ಕೃತ





*ಭಕ್ತರಾದವರೆಲ್ಲರನೂ ಒಂದೇ ಎಂಬೆ;*
*ಹಾರುವ ಮೊದಲು ಶ್ವಪಚ ಕಡೆಯಾಗಿ,*
*ಭವಿಯಾದವರನೆಲ್ಲರನೂ ಒಂದೇ ಎಂಬೆ;*
*ಹೀಗೆಂದು ನಂಬುವುದು ಎನ್ನ ಮನವು,*
*ಈ ನುಡಿದ ನುಡಿಯೊಳಗೆ ಎಳ್ಳಮೊನೆಯಷ್ಟು*
*ಸಂದೇಹವುಳ್ಳಡೆ,*
*ಹಲುದೋರೆ, ಮೂಗ ಕೊಯ್ಯಿ ಕೂಡಲಸಂಗಮದೇವಾ.*

'ಲಿಂಗಧಾರಿಗೆ ಜಾತಿ ಭೇದವಿಲ್ಲ, ಮೇಲು-ಕೀಳೆಂಬುದಿಲ್ಲ. ಅಸಹನೆ, ಅಸಹ್ಯವೆಂಬುದಿಲ್ಲ, ಲಿಂಗ ಧಾರಣೆ ವಿಶ್ವ ಪ್ರೀತಿಯ ಸಂಕೇತ' ಎಂದು ಘೋಷಿಸಿದರು. ಜನ್ಮದಿಂದಲೇ ಮೇಲು-ಕೀಳೆಂದು ವಿಭಜಿಸುವ ಮತ್ತು ಕಸುಬನ್ನು ನಿರ್ಧರಿಸುವ ಜಾತಿಪದ್ಧತಿಯನ್ನು ನಿರ್ಮೂಲನ ಮಾಡಬೇಕೆಂದರು. ಕೆಳಗಿನ ಎರಡು ವಚನಗಳು ಜಾತಿ ಪದ್ಧತಿ ವಿರುದ್ಧ ಬಸವಣ್ಣನವರ ನಿಲುವನ್ನು ಸ್ಪಷ್ಟಪಡಿಸುತ್ತದೆ.

*ನೆಲೆನೊಂದೆ ಹೊಲಗೇರಿ-ಶಿವಾಲಯಕ್ಕೆ*
*ಜಲವೊಂದೆ ಶೌಚಾಚಮನಕ್ಕೆ*
*ಕುಲವೊಂದೆ ತನ್ನ ತಾನರಿದವಂಗೆ*
*ಫಲವೊಂದೆ ಷಡುದರುಶನ ಮುಕ್ತಿಗೆ*
*ನಿಲವೊಂದೆ, ಕೂಡಲಸಂಗಮದೇವಾ ನಿಮ್ಮನರಿದವಂಗೆ!*

* * *

*ಇವನಾರವ ಇವನಾರವ ಇವನಾರವನೆಂದೆನಿಸದಿರಯ್ಯಾ*
*ಇವನಮ್ಮವ ಇವನಮ್ಮವ ಇವನಮ್ಮವನೆಂದೆನಿಸಯ್ಯಾ*
*ಕೂಡಲಸಂಗಮದೇವಯ್ಯಾ ನಿಮ್ಮ ಮನೆಯ*
*ಮಗನೆಂದೆನಿಸಯ್ಯಾ*

ಜಾತಿ ಹಾಗೂ ವರ್ಗಪದ್ಧತಿಯ ಆಧಾರದ ಮೇಲೆ ಅನುಸರಿಸುತ್ತಿದ್ದ ಅಸ್ಪೃಶ್ಯತೆಯನ್ನು ತೀವ್ರವಾಗಿ ಬಸವಣ್ಣ ಖಂಡಿಸಿದರು. 'ಇದು ಮಾನವಧರ್ಮಕ್ಕೆ ಹಾಗೂ ಮಾನವೀಯತೆಗೆ ವಿರುದ್ಧವಾದುದು ಹಾಗೂ ಅವಹೇಳನ ಕಾರಿಯಾದುದು' ಎಂದು ಸಾರಿದರು. ಮಧುವರಸ ಪುತ್ರಿ ಹಾಗೂ ಹರಳಯ್ಯನ ಪುತ್ರರ ಅಂತರಜಾತಿಯ ವಿವಾಹವನ್ನು ಬಸವಣ್ಣ ಸ್ವಾಗತಿಸಿ, ಬೆಂಬಲ ನೀಡಿದರು. ಅಂದಿನ ಸಂದರ್ಭದಲ್ಲಿ ಇಂತಹ ಕ್ರಾಂತಿಕಾರಿ ನಿಲುವನ್ನು ತಾಳಿದ ಇವರು ಜಾತ್ಯಾತೀತವಾದಿಯಾಗಿ ಮತ್ತು ಮಾನವತಾವಾದಿಯಾಗಿ ಮಹಾಪುರುಷರೆಂದು ಪೂಜಿಸಲ್ಪಟ್ಟರು. ಸಮಾಜದ ಡೊಂಕನ್ನು ತಿದ್ದಲು ಹೆದರಲಿಲ್ಲ ಮತ್ತು ಅಧಿಕಾರದ ಹಿಂದೆ ಹೋಗಲಿಲ್ಲ.

ಎಲ್ಲರನ್ನೂ ಸಮಾನತೆಯಿಂದ ಮತ್ತು ಗೌರವದಿಂದ ಕಾಣುತ್ತಿದ್ದ ಇವರು, ಹುಟ್ಟು ಆಧಾರಿತ ಅಹಂಕಾರವನ್ನು ಮತ್ತು ಗರ್ವವನ್ನು ಟೀಕಿಸಿದರು. ಎಲ್ಲರಲ್ಲೂ ಭಾವೈಕ್ಯತೆಯನ್ನುಂಡುಮಾಡುವುದು ಇವರ ಉನ್ನತ ಗುರಿಯಾಗಿತ್ತು. ತಮ್ಮ ವಚನವೊಂದರಲ್ಲಿ ಕೆಳಗಿನಂತೆ ನುಡಿದರು:

*ಕಳಬೇಡ, ಕೊಲಬೇಡ, ಹುಸಿಯ ನುಡಿಯಲು ಬೇಡ*
*ಮುನಿಯಬೇಡ, ಅನ್ಯರಿಗೆ ಅಸಹ್ಯ ಪಡಬೇಡ*
*ತನ್ನ ಬಣ್ಣಿಸಬೇಡ, ಇದಿರ ಹಳಿಯಲು ಬೇಡ*
*ಇದೆ ಅಂತರಂಗ ಶುದ್ಧಿ, ಇದೇ ಬಹಿರಂಗ ಶುದ್ಧಿ*
*ಇದೇ ನಮ್ಮ ಕೂಡಲಸಂಗಮದೇವರನೊಲಿಸುವ ಪರಿ.*

ಅಲ್ಲದೇ, ಸಮಾಜದ ಬಲಹೀನರನ್ನು ಮತ್ತು ಬಡವರನ್ನು ಬಲ್ಲಿದರು ಹೀಯಾಳಿಸುತ್ತಿದ್ದನ್ನು ಬಸವಣ್ಣನವರು ಸಹಿಸಲಿಲ್ಲ. ಮಾನವತಾವಾದಿಯಾಗಿದ್ದ ಇವರ ದೃಷ್ಟಿಯಲ್ಲಿ ಎಲ್ಲರೂ ದೇವರ ಮಕ್ಕಳಾಗಿದ್ದರು. ಎಲ್ಲ ವರ್ಗದವರೂ ಸಹೃದಯತೆಯಿಂದ ಹೊಂದಿ, ಸೌಜನ್ಯದಿಂದ ನಡೆದು ಕೊಳ್ಳಬೇಕೆಂದು ಸಲಹೆ ನೀಡಿದರು. ಸದ್ಗುಣ ಮತ್ತು ಸೌಜನ್ಯ ಶೀಲ ವ್ಯಕ್ತಿ ಎಲ್ಲರನ್ನೂ ಗೌರವದಿಂದ ಹಾಗೂ ಮಾನವೀಯ ತೆಯಿಂದ ಕಾಣುತ್ತಾನೆ. 'ನುಡಿದರೆ ಮುತ್ತಿನ ಹಾರದಂತಿರ ಬೇಕು' ಎಂಬ ಇವರ ವಾಣಿ ಮಾನವತಾವಾದಕ್ಕೆ ಮತ್ತು ನಾಗರಿಕ ಸಂಸ್ಕೃತಿಗೆ ಪೂರಕವಾಗಿದೆ. ಶ್ರೀಮಂತರ ಮತ್ತು ಅಧಿಕಾರದಲ್ಲಿದ್ದವರ ಗರ್ವವನ್ನು ಕುರಿತು ತಮ್ಮ ವಚನದಲ್ಲಿ ಹೀಗೆ ಹೇಳಿದರು:

*ಏನು ಬಂದಿರಿ ಹದುಳವಿದ್ದಿರೆ ಎಂದಡೆ*
*ನಿಮ್ಮ ಮೈಸಿರಿ ಹಾರಿ ಹೋಹುದೆ?*
*ಕುಳ್ಳಿರೆಂದಡೆ ನೆಲ ಕುಳಿಹೋಹುದೆ?*
*ಒಡನೆ ನುಡಿದಡೆ ಸಿರಹೊಟ್ಟೆಯೊಡೆವುದೆ?*
*ಕೊಡಲಿಲ್ಲದಿದ್ದಡೊಂದು ಗುಣವಿಲ್ಲದಿದ್ದಡೆ*
*ಕೆಡಹಿ ಮೂಗ ಕೊಯ್ಯದೆ ಮಾಬನೆ*
*ಕೂಡಲಸಂಗಮದೇವರು.*

ಬಸವಣ್ಣನವರ ಪ್ರಕಾರ ಸಾಮಾಜಿಕ ಸಮಾನತೆಯ ಜೊತೆಗೆ, ಆರ್ಥಿಕ ಸಮಾನತೆ ಇದ್ದಾಗ ಮಾನವೀಯತೆಯ ಗುಣಗಳು ಹೆಚ್ಚುತ್ತವೆ ಮತ್ತು ಸಮಾಜದಲ್ಲಿ ನೆಮ್ಮದಿ ನೆಲೆಸುತ್ತದೆ. ಆದ್ದರಿಂದ ಇವರು ಸಮಾಜವಾದವನ್ನು ಲಕ್ಷಣ

ಮಾನವತಾವಾದದ ಬೆನ್ನೆಲುಬೆಂದು ಪರಿಗಣಿಸಿದ್ದರು ಎಂದರೆ ತಪ್ಪಾಗಲಾರದು. ಕಾರ್ಲ್ ಮಾರ್ಕ್ಸ್‌ನಂತೆ ಬಸವಣ್ಣನವರು ಕಾರ್ಮಿಕರ ಮತ್ತು ಬಡವರ ಬಂಧುವಾಗಿದ್ದರೂ, ಕಾರ್ಲ್ ಮಾರ್ಕ್ಸ್‌ನಂತೆ ವರ್ಗಕಲಹವನ್ನು ಪ್ರತಿಪಾದಿಸಲಿಲ್ಲ ಮತ್ತು ಹಿಂಸಾ ಮಾರ್ಗವನ್ನು ಬೋಧಿಸಲಿಲ್ಲ. ಅಹಿಂಸಾ ಮಾರ್ಗದ ಮೂಲಕ ಸಮಾಜ ವಾದವನ್ನು ಅನುಷ್ಠಾನಗೊಳಿಸುವುದು ಇವರ ಅಭಿಮತವಾಗಿತ್ತು. ಶಾಂತಿಯುತ ಹಾಗೂ ಸಹಬಾಳ್ವೆಗೆ ಸಮಾಜವಾದ ಅತ್ಯಗತ್ಯವೆಂದು ನಂಬಿದ್ದರು. ಬಿಜ್ಜಳನ ಆಸ್ಥಾನದಲ್ಲಿ ಪ್ರಧಾನಮಂತ್ರಿಯಾಗಿದ್ದರೂ ಸಕಲ ಜೀವಾತ್ಮರಿಗೆ ಲೇಸನ್ನು ಬಯಸಿದರು.

ಬಸವಣ್ಣನವರ ಸಮಾಜವಾದ ಪರಿಕಲ್ಪನೆಯಲ್ಲಿ ಸರಳ ಜೀವನ, ಕಾಯಕದ ಹಿರಿಮೆ, ಸರ್ವರಿಗೂ ಸಮ ಬಾಳು, ಧರ್ಮದರ್ಶಿತ್ವ, ಸತ್ಯ ಮತ್ತು ಮಾನವೀಯತೆ ಮುಂತಾದ ಶ್ರೇಷ್ಠ ಅಂಶಗಳು ಅಡಕವಾಗಿವೆ. ಸರಳ ಜೀವನ ಮನುಷ್ಯನಲ್ಲಿ ತೃಪ್ತಿ ಉಂಟುಮಾಡುತ್ತದೆ ಮತ್ತು ದುರಾಸೆಯನ್ನು ದೂರವಿಡುತ್ತದೆ. ಇಲ್ಲಿ ಭ್ರಷ್ಟಾಚಾರಕ್ಕೆ ಹಾಗೂ ಅಧಿಕಾರ ದುರುಪಯೋಗಕ್ಕೆ ಆಸ್ಪದವಿಲ್ಲ. ಉನ್ನತ ರಾಜಕೀಯ ಸ್ಥಾನವನ್ನು ಅಲಂಕರಿಸಿದ್ದ ಇವರು ಪ್ರಾಮಾಣಿಕತೆ ಮತ್ತು ಮಾನವೀಯತೆಯನ್ನು ಬೆಂಬಲಿಸಿ, ಅನುಸರಿಸಿದರು. 'ಮಂತ್ರಿಯಾಗಿ ನಾನು ಅಗತ್ಯಕ್ಕಿಂತ ಹೆಚ್ಚಾಗಿ ಸಂಗ್ರಹಿಸಿಟ್ಟುಕೊಂಡರೆ ಅದು ಕಳ್ಳತನವಲ್ಲವೆ ಪ್ರಭು' ಎಂದು ತಮ್ಮ ಪ್ರಾಮಾಣಿಕತೆಯನ್ನು ಪ್ರದರ್ಶಿಸಿದರು. ಇವರ ವಚನ ಭ್ರಷ್ಟರಿಗೆ ಎಚ್ಚರಿಕೆಯಂತಿದೆ.

*ಊರ ಮುಂದೆ ಹಾಲಹಳ್ಳ*
*ಹರಿಯುತ್ತಿರಲು ಒರೆಯಾವಿನ*
*ಬೆನ್ನಲ್ಲಿ ಹರಿಯಲದೇಕಯ್ಯಾ?*
*ಲಜ್ಜೆಗೆಡಲೇಕೆ? ನಾಣುಗೆಡಲೇಕೆ ?*
*ಕೂಡಲಸಂಗಮದೇವಯ್ಯನ್ನುಳ್ಳನ್ನಕ್ಕ*
*ಬಿಜ್ಜಳನ ಭಂಡಾರವೆನಗೇಕಯ್ಯಾ?*

ಕಾಯಕದಲ್ಲಿ ಬಸವಣ್ಣನವರಿಗೆ ಅಪಾರವಾದ ಗೌರವವಿತ್ತು. '**ಕಾಯಕವೇ ಕೈಲಾಸ**' ಎಂಬ ನುಡಿಯನ್ನು ಮೈಗೂಡಿಸಿಕೊಂಡು ಸಮಾಜದ ತಿರುಳಾಗಿ ಮಾಡಿದರು. 'ಸಾಧನೆಯಿಂದ ನರ ಹರನಾಗಬಲ್ಲ' ಎಂದು ಸಾಬೀತುಪಡಿಸಿದರು. ಕಾಯಕದ ಮಹಿಮೆಯನ್ನು ಮತ್ತು ಅದರಲ್ಲಿರುವ ಮಾನವೀಯ ಗುಣವನ್ನು ಜೀವಂತಗೊಳಿಸಲು ಕೆಳಗಿನ ವಚನವನ್ನು ರಚಿಸಿದರು.

*ಎನ್ನ ಕಾಯವ ದಂಡಿಗೆ ಮಾಡಯ್ಯಾ,*
*ಎನ್ನ ಶಿರವ ಸೋರೆಯ ಮಾಡಯ್ಯಾ,*
*ಎನ್ನ ನರವ ತಂತಿಯ ಮಾಡಯ್ಯಾ,*
*ಎನ್ನ ಬೆರಳ ಕಡ್ಡಿಯ ಮಾಡಯ್ಯಾ,*
*ಬತ್ತೀಸರಾಗವ ಹಾಡಯ್ಯಾ, ಉರದಲೊತ್ತಿ ಬಾರಿಸು*
*ಕೂಡಲಸಂಗಮದೇವಾ*

ಬಸವಣ್ಣನವರ ಪ್ರಕಾರ ಸರ್ವರಿಗೂ ಸಮಬಾಳು ದೊರಕಬೇಕಾದರೆ ಧರ್ಮದರ್ಶಿತ್ವವನ್ನು ಅಳವಡಿಸಿಕೊಳ್ಳಬೇಕು. ಶ್ರೀಮಂತರು ಮತ್ತು ಉಳ್ಳವರು ಸ್ವಯಂ ಇಚ್ಛೆಯಿಂದ, ತಮ್ಮ ಸರಳ ಜೀವನಕ್ಕೆ ಬೇಕಾಗುವಷ್ಟು ಇಟ್ಟುಗೊಂಡು, ಉಳಿದದ್ದನ್ನು ಸಮಾಜಕ್ಕೆ ಹಂಚಬೇಕು. ಇಲ್ಲಿ ಬಲವಂತಕ್ಕೆ, ಬೆದರಿಕೆಗೆ ಮತ್ತು ಸರ್ಕಾರದ ಹಸ್ತಕ್ಷೇಪಕ್ಕೆ ಅವಕಾಶವಿಲ್ಲ. ಬಸವಣ್ಣನವರು ರಾಜಕೀಯಕ್ಕೆ ಕಾಲಿಟ್ಟಿದ್ದು ಸ್ವಹಿತಕ್ಕಾಗಿಯಲ್ಲ, ಜನಹಿತಕ್ಕಾಗಿ ಮತ್ತು ಜನಸಾಮಾನ್ಯರಲ್ಲಿ ನವಚೈತನ್ಯವನ್ನು ತುಂಬುವುದಕ್ಕಾಗಿ, ಕೆಲವು ವಿದ್ವಾಂಸರ ಅಭಿಪ್ರಾಯದಲ್ಲಿ ಬಸವಣ್ಣನವರು ಧರ್ಮದರ್ಶಿತ್ವ ಆಧಾರಿತ ಸಮಾಜವಾದವನ್ನು ಬೆಂಬಲಿಸಿದರು.

*ಕಾಗೆ ಒಂದ ಗುಳ ಕಂಡಡೆ ಕರೆಯದೆ ತನ್ನ ಬಳಗವನು?*
*ಕೋಳಿ ಒಂದು ಕುಟುಕ ಕಂಡಡೆ ಕೂಗಿ ಕರೆಯದೆ*
*ತನ್ನ ಕುಲವನೆಲ್ಲವ?*
*ಶಿವಭಕ್ತನಾಗಿ ಭಕ್ತಿಪಕ್ಷವಿಲ್ಲದಿದ್ದಡೆ ಕಾಗೆ ಕೋಳಿಗಿಂತ*
*ಕರಕಷ್ಟ ಕೂಡಲಸಂಗಮದೇವಾ*

ಬಸವಣ್ಣನವರ ದೃಷ್ಟಿಯಲ್ಲಿ ಸತ್ಯಕ್ಕಿಂತ ಮಿಗಿಲಾದುದು ಯಾವುದೂ ಇಲ್ಲ. 'ಸತ್ಯವೇ ದೇವರು', 'ಸತ್ಯವೇ ಜೀವನ ತಿರುಳು', ಸತ್ಯಕ್ಕಿಂತ ಮಿಗಿಲಾದ ವ್ರತವಿಲ್ಲ ಎಂದರು. ಸತ್ಯವನ್ನು ನುಡಿಯುವುದು ಧರ್ಮದ ಆಚರಣೆಯಾಗುತ್ತದೆ ಮತ್ತು ಮಾನವೀಯತೆಯ ಲಕ್ಷಣವಾಗುತ್ತದೆ. ತಮ್ಮ ವಚನವೊಂದರಲ್ಲಿ ಸತ್ಯದ ಮಹಿಮೆಯನ್ನು ಹೀಗೆ ತಿಳಿಸಿದ್ದಾರೆ.

*ದೇವಲೋಕ ಮರ್ತ್ಯಲೋಕವೆಂಬುದು ಬೇರಿಲ್ಲ ಕಾಣಿರೊ*
*ಸತ್ಯವ ನುಡಿವುದೇ ದೇವಲೋಕ; ಮಿಥ್ಯ*
*ನುಡಿವುದೇ ಮರ್ತ್ಯಲೋಕ*
*ಆಚಾರವೇ ಸ್ವರ್ಗ; ಅನಾಚಾರವೇ ನರಕ,*
*ಕೂಡಲಸಂಗಮದೇವಾ ನೀವೇ ಪ್ರಮಾಣು.*

ಬಸವಣ್ಣನವರ ಮತ್ತೊಂದು ಮಾನವೀಯತೆಯ





..................................................
*ಕಾಕಭಾಜನಮಾಗಿ ಪೋಗುತಿರ್ದಪುದಕಟ*
*ಲೋಕಾಯತರ್ಗೆ ಸಾರುತಿರ್ದಪುದಕಟ*

ಎಂದು ನುಡಿಯುತ್ತಾನೆ. 'ಅಯ್ಯಲಾ! ಇಂತಪ್ಪ ಅನರ್ಘ್ಯ' ಎಂಬ ಮಾತು ಆ ಭಂಡಾರ ಬಹುದೊಡ್ಡದಾಗಿದುದನ್ನು ಸೂಚಿಸುತ್ತದೆ. 'ಕಾಕಭಾಜನಮಾಗಿ ಹೋಗುತಿರ್ದಪುದಕಟ' ಎಂಬುದು ಅಂದಿನ ಅದರ ಅಪವ್ಯಯದ ಅಧಿಕ್ಯವನ್ನು ಧ್ವನಿಸುತ್ತದೆ. ಈ ಅಪವ್ಯಯವೆಂಬುದು ಮೇಲೆ ಹೇಳಿದ ರಾಜಶಾಹಿ, ಪುರೋಹಿತಶಾಹಿ ಮೊದಲಾದವರು ಮನಬಂದಂತೆ ಭೋಗಿಸುವುದೇ ಆಗಿದೆ. ಹರಿಹರನ ದೃಷ್ಟಿಯಲ್ಲಿ ಇವರು 'ಲೋಕಾಯುತರು' ಅಂದರೆ ಪದಾರ್ಥವಾದಿಗಳು(Materialistic people), ಭವಿಗಳು, ಇಂಥವರು ಭಂಡಾರದ ನಿಜವಾದ ವಾರಸುದಾರರಲ್ಲ. 'ಲಿಂಗಾಯತರು' (Non-Materialistic people) ಅಂದರೆ ಪ್ರಸಾದವಾದಿಗಳು, ಭಕ್ತರು ಮಾತ್ರ ಇದರ ನಿಜವಾದ ವಾರಸುದಾರರು. ಒಟ್ಟಿನಲ್ಲಿ ಪದಾರ್ಥವಾದಿಯು ರಾಜನೇ ಆಗಿದ್ದರೂ ಭಂಡಾರ ಅವನ ಸೊತ್ತಲ್ಲ. ಪ್ರಸಾದವಾದಿಯು ಬಡ ಪ್ರಜೆಯಾಗಿದ್ದರೂ ಭಂಡಾರ ಅವರ ಸೊತ್ತು. ಇದು ಬಸವ ಸಿದ್ಧಾಂತ. ಹೀಗಾಗಿ ಹರಿಹರನ ಬಸವಣ್ಣ ಭಂಡಾರವನ್ನು ಕುರಿತು 'ಭಕ್ತನೊಡವೆ ಕೆಡಲಾಗದು' ಎನ್ನುತ್ತಾನೆ. ಭಕ್ತರಿಗೆ ಅದನ್ನು ವಿನಿಯೋಗಿಸುವಾಗ 'ನಿಮ್ಮರ್ಥಮಂ ನಿಮಗೆ ತೊತ್ತುಗೆಲಸಂ ಮಾಡಿ ನೀಡುವ ಕಿಂಕರಂ' ತಾನೆಂದು ಹೇಳಿಕೊಳ್ಳುತ್ತಾನೆ. ಭಂಡಾರ ಭಕ್ತರಿಗೆ ವಿನಿಯೋಗವಾಗುವುದನ್ನು ಬಿಜ್ಜಳ ಪ್ರತಿಭಟಿಸಲು 'ಶಿವಭಕ್ತರ್ ನಿನ್ನೊಡವೆಗಾಸೆ ಮಾಳ್ಪರೆ? ತಮ್ಮೊಡವೆಯಂ ತಾವೆ ಕೊಂಡರೆ' ಎನ್ನುತ್ತ ಭಂಡಾರ ಬಿಜ್ಜಳನದಲ್ಲ. ಭಕ್ತರದು ಎಂದು ಸೂಚಿಸುತ್ತಾನೆ.

'ಭಂಡಾರದ ಒಡೆಯ ರಾಜನಲ್ಲ ಭಕ್ತರು' ಎಂಬ ತತ್ವದ ಬಸವಣ್ಣನವರು ಅಧಿಕಾರ ವಹಿಸಿಕೊಂಡ ಬಳಿಕ, ಈ ಕಡೆ ಮೊದಲಿನಿಂತೆ ಮುಕ್ತವಾಗಿ ಭಂಡಾರವನ್ನು ಬಳಸುವುದು ಬಿಜ್ಜಳನಿಗೂ ದುಸ್ತರವಾಗಿ, ಅವನ ಮನಸ್ಸಿಗೆ ಕಿರಿಕಿರಿಯಾಗಿರಬೇಕು. ಆ ಕಡೆ ಅಗ್ರಹಾರದ ನಿರ್ಮಾಣ, ಪುರೋಹಿತರ ದಾನಗಳ ಹೆಸರಿನಲ್ಲಿ ಹಣ ಹರಿದು ಹೋಗುವುದೂ ನಿಂತ ಕಾರಣ, ಅದನ್ನು ಭೋಗಿಸುತ್ತಿದ್ದ ಪುರೋಹಿತ ವರ್ಗವೂ ಬಸವಣ್ಣನ ಮೇಲೆ ಕ್ರೋಧತಪ್ತರಾಗಿರಬೇಕು.

ಹೀಗೆ ಒಂದು ಕಡೆ ಭಂಡಾರವನ್ನು ಭವಿಗಳು ಭೋಗಿಸುವುದಕ್ಕೆ ನಿರ್ಬಂಧ ಹಾಕಿದ ಬಸವಣ್ಣ, ಇನ್ನೊಂದು ಕಡೆ 'ಆನೆ ಭಂಡಾರ ಲಾಯದ ಕುದುರೆ ಬೇಡುವರಿಲ್ಲದೆ ಬಡವನಾದೆನಯ್ಯಾ' ಎಂಬ ಭಾವದಿಂದ ಅದನ್ನು ಭಕ್ತರಿಗೆ ವಿನಿಯೋಗಿಸಲು ಪ್ರಾರಂಭಮಾಡುತ್ತಾನೆ. 'ಭಕ್ತ' ಪದಕ್ಕೆ ಇಲ್ಲಿ ಪರ್ಯಾಯವಾಗಿ 'ಜಂಗಮ' ಎಂಬುದು ಬಳಕೆಯಾಗಿರುವುದರಿಂದಲೂ, 'ಜಂಗಮದಲ್ಲಿ ಜಾತಿಯನರಸೆ' ಎಂಬ ಮಾತಿ ನಿಂದಲೂ ಇವರು ಇಂದಿನ ಜಾತಿನಿಷ್ಠ ಜಂಗಮರಲ್ಲ. ಅದೇ ಆಗ ರೂಪುಗೊಳ್ಳುತ್ತಲಿದ್ದ ಗುಣನಿಷ್ಠಜನಸಮುದಾಯವೆಂದು ಸ್ಪಷ್ಟವಾಗುತ್ತದೆ.

ಬಸವಣ್ಣನವರ ಅಂದಿನ ನೂತನ ಸಮಾಜದಲ್ಲಿ ದುಡಿಮೆಗೆ ಮಹತ್ವವಿದ್ದಿತು. ಆದರೆ ಪುರಾಣಗಳಲ್ಲಿ ದುಡಿಮೆಯ ಪ್ರಸ್ತಾಪ ಬರದೆ ಕೇವಲ ಭಂಡಾರ ವಿನಿಯೋಗದ ವಿಷಯ ಬರುತ್ತದೆ. ಇದಕ್ಕೆ ಸಮಾಧಾನವಿಷ್ಟು; ಭಂಡಾರದ ಸಂಪತ್ತು ಮೂಲತಃ ಜನಸಮುದಾದಯ ಶ್ರಮದಿಂದಲೇ ಶೇಖರಿಸಲ್ಪಟ್ಟಿರುತ್ತದೆ. ತಮಗರಿಯದಂತೆ ರಾಜ್ಯ ಭಂಡಾರ ಬೆಳೆಸಿದ ವರ್ಗವಿದು. ಅವರಿಗೆ ದುಡಿಮೆಯನ್ನು ಹೇಳುವ ಮೊದಲು, ಅವರು ಬದಕಲು ಅವಶ್ಯವಿರುವ ವಸ್ತ್ರ, ಅನ್ನ, ವಸತಿಗಳನ್ನು ಪೂರೈಸಿಕೊಡುವುದು ಸರಕಾರದ ಪ್ರಥಮ ಕರ್ತವ್ಯ. ಈ ಕರ್ತವ್ಯವನ್ನು ಪೂರೈಸುವ ರೀತಿಯಲ್ಲಿ ಬಸವಣ್ಣ ಪ್ರಾರಂಭದ ಹಂತದಲ್ಲಿ ಹೀಗೆ ಹಣವನ್ನು ಅವರಿಗೆ ವಿನಿಯೋಗಿಸಿದಂತೆ ಕಾಣುತ್ತದೆ. ಈ ಘಟನೆ ಸ್ಥೂಲನೋಟಕ್ಕೆ ಆರೋಪ ಹೊರಿಸುವವರಿಗೆ ಅಪವ್ಯಯವೆಂದು ತೋರುವುದು ಸಹಜ. ತಮಗೆ ಬರುತ್ತಿರುವ ಲಾಭ ತಪ್ಪಿದವರಿಗಂತೂ ಇದು ಅಪವ್ಯಯವೆಂದು ತೋರುವುದು ಇನ್ನೂ ಸಹಜ. ಅಂಥವರು ಮಾಡಿದ ಅಪಪ್ರಚಾರ ಸಮಾಜದಲ್ಲಿ ದಟ್ಟವಾಗಿ ಹರಡಿ, ಅದು ಬಸವಣ್ಣನ ಕಿವಿಗೂ ಮುಟ್ಟಿದಂತಿದೆ. ಅವನ ವಚನಗಳಲ್ಲಿ ರಾಜಕೀಯ ಕ್ಷೇತ್ರದ ಇತರ ವಿಷಯಗಳಿಗೆ ಬದಲು, ಭಂಡಾರದ ಪ್ರಸ್ತಾಪವೇ ಬಹಳ ಸಲ ಬರುತ್ತದೆ. ಅಲ್ಲಿ ಒಮ್ಮೆ ಸ್ವಗತವಾಗಿ ತನ್ನನ್ನು ತಾನೇ ಸಂತೈಸಿಕೊಳ್ಳುವ ಧ್ವನಿ, ಮತ್ತೊಮ್ಮೆ ಈ ಸುಳ್ಳು ಆರೋಪವನ್ನು ವ್ಯಕ್ತವಾಗಿ ತಳ್ಳಿಹಾಕುವ ಧ್ವನಿ, ಇನ್ನೊಮ್ಮೆ ಬಿಜ್ಜಳ ತನ್ನ ಮೇಲೆ ಕ್ರಮಕೊಳ್ಳಲು ಸಿದ್ಧನಾಗಿದ್ದಾನೆ; ಅದಕ್ಕೆ ತಾನು ಅಂಜುವುದಿಲ್ಲವೆಂಬ ಧೀರ ಧ್ವನಿಗಳು ಕೇಳಿಸುತ್ತವೆ.

*ತನುವ ಬಂದಲೆವರಯ್ಯಾ, ಎನ್ನ ಮನವ ಬಂದು*
*ನೋಡುವರಯ್ಯಾ,*

*ಎನ್ನ ಧನವ ಬಂದು ಸೂರೆಗೊಂಬರಯ್ಯಾ,*
*ಜಂಗಮವನವರತ, ಕೂಡಲಸಂಗಮದೇವಾ,*
*ನಿಮ್ಮ ಬಯಕೆಯ ಭಂಡಾರಕ್ಕೆ ನಾನು ಶುದ್ಧನಯ್ಯಾ.*

ಇಲ್ಲಿ ಕೂಡಲಸಂಗಮದೇವಾ, ಭಂಡಾರಕ್ಕೆ ನಾನು ಶುದ್ಧನಯ್ಯಾ' ಎಂದು, ಸ್ವಗತವಾಗಿ ತನ್ನನ್ನೇ ತಾನು ಸಂತೈಸಿ ಕೊಳ್ಳುತ್ತಾನೆ. ದೇವರ ಸಾಕ್ಷಿಯಾಗಿ ಮನಸ್ಸಿನಲ್ಲಿಯೇ ಮಾತ ನಾಡಿಕೊಳ್ಳುತ್ತಾನೆ. ಬಹುಶಃ ಈ ಆರೋಪದ ವಾತಾವರಣ ಇನ್ನೂ ಗಂಭೀರವಾಗಿರಬಹುದಾದ ಪ್ರಸಂಗದಲ್ಲಿ

*ಊರಮುಂದೆ ಹಾಲಹಳ್ಳ ಹರಿವುತ್ತಿರಲು*
*ಒರೆಯಾವಿನ ಬೆನ್ನಲಿ ಹರಿಯಲದೇಕಯ್ಯಾ?*
*ಲಜ್ಜೆಗೆಡಲೇಕೆ ? ನಾಣುಗೆಡಲೇಕೆ?*
*ಕೂಡಲ ಸಂಗಮದೇವರುಳ್ಳನ್ನಕ್ಕ*
*ಬಿಜ್ಜಳನ ಭಂಡಾರವೆನಗೇಕಯ್ಯಾ?*

ಎಂಬ ವಚನದ ಮೂಲಕ ಸ್ವಗತವನ್ನು ಬಿಟ್ಟು, ಬಹಿರಂಗ ವಾಗಿ ಈ ಸುಳ್ಳು ಆರೋಪವನ್ನು ತಳ್ಳಿಹಾಕುತ್ತಾನೆ. ಬಹುಶಃ ಬಿಜ್ಜಳ ಕ್ರಮಕ್ಕೈಕೊಳ್ಳುವ ಸಿದ್ಧತೆಯಲ್ಲಿರುವಾಗ

*ಆನೆ ಅಂಕುಶಕ್ಕಂಜವುದೇ ಅಯ್ಯಾ*
*ಮಾಣದೆ ಸಿಂಹದ ನಖವೆಂದು ಅಂಜವುದಲ್ಲದೆ?*
*ಅನೀ ಬಿಜ್ಜಳಂಗೆ ಅಂಜುವೆನೆ ಅಯ್ಯಾ?*
*ಕೂಡಲಸಂಗಮದೇವಾ*
*ನೀನು ಸರ್ವಜೀವ ದಯಾಪಾರಿಯಾದ ಕಾರಣ*
*ನಿನಗಂಜುವೆನಲ್ಲದೆ.*

ಎಂದು ರಾಜನ ವಿರುದ್ಧ ನಿಷ್ಠುರ-ನಿರ್ಭೀತ ನಿಲವು ತಾಳುತ್ತಾನೆ. ಹೀಗೆ ವಚನಗಳಲ್ಲಿ ಪದೇ ಪದೇ 'ಭಂಡಾರ' ಎಂಬ ಪದವನ್ನು, ರಾಜನಾದ 'ಬಿಜ್ಜಳ'ನಾದ ಹೆಸರನ್ನು ಬಳಸಿ ಮಾತನಾಡುವುದೂ-ಖಂಡಿಸುವುದೂ ನಡೆದಿರು ವುದನ್ನೂ ನೋಡಿದರೆ, ಕೆಲವರು ಬಸವಣ್ಣನನ್ನು ಭಂಡಾರ ಅಪವ್ಯಯದ ಆರೋಪಕ್ಕೆ ಗುರಿಮಾಡಿದ್ದರೆಂದು ವಿಧಿತ ವಾಗುತ್ತದೆ. ಈ ಆರೋಪ ಕಾರಣವಾಗಿ ನ್ಯಾಯ ವಿಚಾರಣೆಯೂ ನಡೆಯಿತೆಂಬುದು 'ಬಸವರಾಜದೇವರ ರಗಳೆ'ಯಲ್ಲಿ ಬಸವ ಪುರಾಣ-ಸಿಂಗಿರಾಜ ಪುರಾಣಗಳ ಪೆಟ್ಟಿಗೆ ಪವಾಡ ಸಂದರ್ಭಗಳಲ್ಲಿ ಸೂಚಿತವಾಗಿದೆ.

ಒಟ್ಟಿಗೆ ಬಿಜ್ಜಳ ಬಸವಣ್ಣನವರ ಮಧ್ಯ ಮನಸ್ತಾಪ ಬೆಳೆಯಲು ಧಾರ್ಮಿಕ-ಸಾಮಾಜಿಕ ಅಂಶಗಳು ಕಾರಣ ವಾಗಿರಬಹುದಾದರೂ 'ರಾಜ್ಯ ಭಂಡಾರ'ದ ಒಡೆತನದ ಪ್ರಶ್ನೆಯೇ ಮುಖ್ಯಕಾರಣವಾಗಿರಬೇಕು. ಏಕೆಂದರೆ ಧಾರ್ಮಿಕ ತತ್ವಗಳ ಪ್ರತಿಪಾದನೆ-ಪ್ರಸಾರಗಳು ಬಿಜ್ಜಳನಿಗೆ ಅಪಾಯಕಾರಿಯೇನಲ್ಲ. ಮೇಲಾಗಿ ಅವನೂ ಶೈವಮತೀಯ ನಾಗಿದ್ದಾನೆ. ನೂತನ ಸಾಮಾಜಿಕ ಸಿದ್ಧಾಂತಗಳಲ್ಲಿ ಸ್ತ್ರೀ-ಪುರುಷರೆಂಬ 'ಲಿಂಗಭೇದ ನಿರಾಕರಣೆ'ಯಿಂದಲೂ ಬಿಜ್ಜಳ ನಿಗೆ ಅಪಾಯವಿಲ್ಲ. 'ವರ್ಣಭೇದ ನಿರಾಕರಣೆ'ಯಿಂದ ಪುರೋಹಿತರ ಪ್ರತಿಷ್ಠೆಗೆ ಧಕ್ಕೆ ಬರಬಹುದಾಗಿದೆಯೇ ಹೊರತು ಅದು ಬಿಜ್ಜಳನಿಗೆ ನೇರವಾಗಿ ಸಂಬಂಧಿಸಿದುದಲ್ಲ. ವರ್ಗಭೇದ ನಿರಾಕರಣೆ, ಅದರಲ್ಲಿಯೂ ಭಂಡಾರ ಮೇಲಿನ ರಾಜನ ಹಕ್ಕನ್ನು ಪಶ್ನಿಸುವ ವರ್ಗಭೇದ ನಿರಾಕರಣೆ ಮಾತ್ರ ನೇರವಾಗಿ ಬಿಜ್ಜಳನಿಗೆ ಸಂಬಂಧಿಸಿದ್ದು, ಅದು ಅವನ ಆಡಳಿತದ ಬೇರನ್ನೇ ಅಲುಗಿಸುವ ಭಯವನ್ನು ಹುಟ್ಟಿಸಿ, ಅವನಲ್ಲಿ ಮನಸ್ತಾಪದ ಕಿಡಿ ಹೊತ್ತುವಂತೆ ಮಾಡಿರಬೇಕು. ಇದಕ್ಕೆ 'ವರ್ಣಭೇದ ನಿರಾಕರಣೆ' ಇತ್ಯಾದಿ ಬೇರೆ ಅಂಶ ಗಳೂ ಸೇರಿ, ಕಿಡಿ ಕಿಚ್ಚಾಗಿ ಬೆಳೆದಿರಬೇಕು.

ಹರಳಯ್ಯ-ಮಧುವಯ್ಯನವರ ಮಕ್ಕಳ ಮದುವೆ ಬಸವಣ್ಣನವರ ಅವಸರ ನಿರ್ಣಯ, ಈ ರಕ್ತ ಸಂಬಂಧ ಕಾರಣವಾಗಿ ಬಸವಣ್ಣ-ಬಿಜ್ಜಳರಲ್ಲಿ ಘರ್ಷಣೆಯ ಪ್ರಾರಂಭ-ಮುಕ್ತಾಯ ಘಟಿಸಿತೆಂದು ಸಾಮಾನ್ಯವಾಗಿ ಭಾವಿಸ ಲಾಗುತ್ತದೆ. ಅಂದರೆ 'ವರ್ಣಭೇದ ನಿರಾಕರಣೆ'ಯೇ ಕಲ್ಯಾಣ ಕ್ರಾಂತಿಗೆ ಕಾರಣವಾಯಿತೆಂದೇ ಹೇಳಲಾಗುತ್ತದೆ. ಆದರೆ ಇವರಿಬ್ಬರ ನಡುವಿನ ಮನಸ್ತಾಪಕ್ಕೆ ಈ ಮದುವೆ ಒಂದು ನೆವವಾಗಿದ್ದು, ಇದರ ಹಿಂದೆ ಬಸವಣ್ಣನವರ ಜನಪರ ವಾದ ಹೊಸ 'ಅರ್ಥನೀತಿ'ಯೇ ಬಹಳಷ್ಟು ಕೆಲಸಮಾಡಿದೆ ಯೆಂದು ಭಾವಿಸುವುದು ಹೆಚ್ಚು ವಾಸ್ತವವೆನಿಸುತ್ತದೆ. ದುರ್ದೈವದ ಸಂಗತಿಯೆಂದರೆ ವರ್ಗ ಸಂಘರ್ಷವನ್ನು ಹಿಂದೆದೂಡಿ, ವರ್ಣಸಂಕರವು ಹೆಚ್ಚು ಪ್ರಚಾರ ಪಡೆಯಿತು, ತಲೆಯಲ್ಲಿ 'ಆರ್ಥಿಕ' ಹೊಸವಿಚಾರ, ಕೈಯಲ್ಲಿ 'ರಾಜ್ಯ ಭಂಡಾರ'ದ ಅಧಿಕಾರ, ಇವುಗಳಿಂದಾಗಿ ಬಸವಣ್ಣನವರಿಗೆ ವಿಚಾರವನ್ನು ಆಚಾರದಲ್ಲಿ ತರಲು ಒಳ್ಳೆಯ ಅವಕಾಶ ಪ್ರಾಪ್ತವಾಯಿತು. The history all hitherto existinmg society is the history of all class struggles' ಎಂಬ ಮಾರ್ಕ್ಸ್‌ನ ಮಾತನ್ನು ಬಸವಣ್ಣ ಎಂದೋ ಅರಿತಿದ್ದಾನೆ, ಆಚರಿಸಿದ್ದಾನೆ-ಎಂದು ಇದರಿಂದ ವ್ಯಕ್ತ ವಾಗುತ್ತದೆ. 'ಅವನೇವನಾದರೇನು? ಹೇಮವಿಲ್ಲದಂಗೈಸ





ಬಹುದೇ?' ಎನ್ನುವ ಬಸವಣ್ಣ 'ಅರ್ಥ'ದ ಮಹತ್ವ ತಿಳಿದ ವ್ಯಕ್ತಿಯಾಗಿದ್ದ, ಆದುದರಿಂದ ಬಿಜ್ಜಳ ಬಸವಣ್ಣ ಇವರ ನಡುವಿನ ಘರ್ಷಣೆಗೆ ಮುಖ್ಯ ಕಾರಣ 'ಬಸವಣ್ಣನ ಆರ್ಥಿಕ ನೀತಿ'ಯೇ ಆಗಿದೆಯೆಂದು ಹೇಳುವುದು ನ್ಯಾಯಸಮ್ಮತ.

ಬಹುಶಃ ಬಸವಣ್ಣ ಭಂಡಾರದ ಮಂತ್ರಿಯಾಗದೆ ಬೇರೆ ಮಂತ್ರಿಯಾಗಿದ್ದರೆ, ಇಷ್ಟು ಬೇಗ ಅವರಿಬ್ಬರಲ್ಲಿ ಮನಸ್ತಾಪ ಉದ್ಭವಿಸುತ್ತಿರಲಿಲ್ಲ. ಇಷ್ಟು ದೀರ್ಘಕ್ಕೆ ಹೋಗು ತ್ತಿರಲಿಲ್ಲ. ಬಸವಣ್ಣನನ್ನು ಭಂಡಾರಿಯನ್ನಾಗಿ ಮಾಡುವ ಮೂಲಕ ಬಿಜ್ಜಳನ ಪರಿಸ್ಥಿತಿ, ಹಗ್ಗಕೊಟ್ಟ ಕೈ ಕಟ್ಟಿಸಿಕೊಂಡಂ ತಾಗಿರಬೇಕು. ಹೀಗಾಗಿ ಶರಣರ ಚಳುವಳಿ ಕೇವಲ ಸಮಾಜೋ-ಧಾರ್ಮಿಕವಲ್ಲ. ಅದು ಆರ್ಥಿಕ ಚಳುವಳಿಯೂ ಆಗಿದ್ದು, ಆ ಮೂಲಕ ರಾಜಕೀಯ ಚಳುವಳಿಯೂ ಆಗಿದೆ. ಆದುದರಿಂದ 'ಲಿಂಗಾಯತ ಚಳುವಳಿ ಮುಖ್ಯವಾಗಿ ಸಮಾಜೋ-ಧಾರ್ಮಿಕ ಸ್ವರೂಪದ್ದು, ಸಮಾಜೋ ಆರ್ಥಿಕ ಸ್ವರೂಪದ್ದು ಅಲ್ಲ' ಎಂಬಂಥ ವಿದ್ವಾಂಸರ ಮಾತುಗಳನ್ನು ಪುನಃ ಪರಿಶೀಲಿಸಬೇಕಾಗುತ್ತದೆ.

## ಬಸವಣ್ಣನವರಿಗೆ

ಇರಬಹುದು ನಿನಗಿಂತ ದೊಡ್ಡವರು, ಅನುಭಾವದಲ್ಲಿ
ಮೇಲೇರಿ ಬಯಲಾದವರು; ಇರಬಹುದು
ನಿನಗಿಂತಲೂ ದೊಡ್ಡತ್ಯಾಗಿಗಳು, ವಿರಾಗಿಗಳು
ಇರಲಾರರೆಂದೇ ತೋರುತಿದೆ ನಿನ್ನಂತೆ
ನಿನ್ನಳಗಿನಂಕು-ಡೊಂಕುಗಳನ್ನು ಕಂಡುಕೊಂಡವರು;
ಇರಲಾರರೆಂದೇ ತೋರುತಿದೆ ನಿನ್ನಂತೆ ಒಳಗು
ಹೊರಗುಗಳನ್ನು

ಮುಚ್ಚುಮರೆಯಿಲ್ಲದೆಯೆ ದಿನವೂ ಬಿಚ್ಚಿಟ್ಟು
ಒಗೆದು ಮಡಿಮಾಡಿ, ಇಷ್ಟದೈವದ ಗುಡಿಗೆ ನಡೆ
ಮಡಿಯಾಗಿ ಹಾಸಿದವರು; ಕರ್ತಾರನೀ ಕಮ್ಮಟದ
ಅಡಿಗಲ್ಲು-ಸುತ್ತಿಗೆ ನಡುವೆ ಕಡಿಹಕ್ಕೆ ಬಡಿಹಕ್ಕೆ ಸಿಕ್ಕಿ
ಮೃಡನ ಶರಣ ಕಾಲ ಕಡೆಯಾಣಿಯಾದವರು.
ಹೀಗಾಗಿ ಮಾತೆಲ್ಲ ಮುತ್ತಿವ ಹಾರ; ನಡೆಯೆಲ್ಲ ಲಿಂಗವೆ
ಮೆಚ್ಚಿ ಅಹುದೆಂಬ ಪರಿ. ಇಲ್ಲಿ ಸಂದದ್ದು ಅಲ್ಲಿಯೂ
ಸಲ್ಲುವಂತೆ

ಬದುಕಿದವ ನೀನು-ಸಂಗನ ಮುಂದೆ ಕರ್ಪೂರ
ಉರಿದಂತೆ.

-ಡಾ॥ ಜಿ.ಎಸ್. ಶಿವರುದ್ರಪ್ಪ

## ಅಭಿನಂದನೆ

ಶ್ರೀಮಠದ ಹಳೆಯ ವಿದ್ಯಾರ್ಥಿಗಳೂ ತುಮಕೂರಿನ ಶ್ರೀ ಸಿದ್ಧಗಂಗಾ ಪ್ರಥಮ ದರ್ಜೆ ಕಾಲೇಜಿನಲ್ಲಿ ಉಪನ್ಯಾಸಕ ರಾಗಿ, ಪ್ರವಾಚಕರಾಗಿ, ಪ್ರಾಧ್ಯಾಪಕರಾಗಿ, ಪ್ರಾಂಶುಪಾಲ ರಾಗಿ ೧೯೬೬ರಿಂದ ೧೯೯೨ರವರೆಗೆ ಸೇವೆ ಸಲ್ಲಿಸಿದ ಪ್ರೊ. ಕಿ. ನಾಗರಾಜಪ್ಪನವರಿಗೆ ಹಂಪೆ ಕನ್ನಡ ವಿಶ್ವವಿದ್ಯಾಲಯ ಶ್ರೀಯುತರ ಸಾಹಿತ್ಯಸೇವೆಯನ್ನು ಪರಿಗಣಿಸಿ 'ನಾಡೋಜ' ಪ್ರಶಸ್ತಿಯನ್ನು ನೀಡಿ ಗೌರವಿಸುತ್ತಿ ರುವುದನ್ನು ಸಿದ್ಧಗಂಗಾ' ತುಂಬು ಹೃದಯದಿಂದ ಅಭಿನಂದಿಸುತ್ತದೆ.

ಶ್ರೀಯುತರು ಗುಬ್ಬಿ ತಾಲ್ಲೂಕಿನ ಕಲ್ಲೂರು ಗ್ರಾಮ ದಲ್ಲಿ ೧೯೩೮ರ ಜನವರಿ ೯ರಂದು ಜನ್ಮತಾಳಿದರು. ಪ್ರಾಥಮಿಕ ಹೈಸ್ಕೂಲ್ ಶಿಕ್ಷಣವನ್ನು ಮುಗಿಸಿದ ನಂತರ ಮೈಸೂರು ವಿಶ್ವವಿದ್ಯಾನಿಲಯದಿಂದ ಕನ್ನಡ ಎಂ.ಎ. ಪದವಿಯನ್ನು ಪಡೆದು ಅಧ್ಯಾಪಕರಾಗಿ ವೃತ್ತಿ ಜೀವನ ಮುಖಿಯಾಗಿ ಕೃಷ್ಣರಾಜಸಾಗರ, ಮೈಸೂರು ಮತ್ತು ತುಮಕೂರುಗಳಲ್ಲಿ ಸೇವೆ ಸಲ್ಲಿಸಿದರು.

ದೊಡ್ಡಸಂಕಣ್ಣನಾಯಕ, ದೇವಾಂಗ ಸಂಸ್ಕೃತಿ, ಮರು ಚಿಂತನೆ, ಇಕ್ಕಟ್ಟು ಬಿಕ್ಕಟ್ಟು ಕೃತಿಗಳನ್ನು ರಚಿಸಿರುವ ಶ್ರೀ ಕೆ.ಜಿ.ಎನ್. 'ಶಿವಕುಮಾರವಾಣಿ'- ಪರಮಪೂಜ್ಯ ಶ್ರೀ ಶ್ರೀಗಳವರ ಆಶೀರ್ವಚನಗಳಿಂದ ಆಯ್ದ ನುಡಿಸಂಕಲನ ವನ್ನು ಸಂಪಾದಿಸಿ ಶ್ರೀ ಗುರುಚರಣಗಳಲ್ಲಿ ಸಮರ್ಪಿಸಿರುತ್ತಾರೆ.

ಅಸ್ಖಲಿತ, ನೇರನುಡಿ ವಾಗ್ಮಿಗಳಾದ ಶ್ರೀಯುತರು ಪ್ರಭಾವಿ ಪ್ರಾಧ್ಯಾಪಕರಾಗಿ ವಿದ್ಯಾರ್ಥಿಗಳ ಮನಗೆದ್ದವರು. ಸಹೋದ್ಯೋಗಿಗಳನ್ನು ಆತ್ಮೀಯ ಹಿರಿಯರಾಗಿ ಮಾರ್ಗ ದರ್ಶನ ಮಾಡಿದ ಸದ್ಗುಣಿಗಳು. ಹೊಗಳಿಕೆಯನ್ನೆಂದೂ ಆಶಿಸದ ನಿರ್ಮಲ ಮನಸ್ಕರು. ನಂಬಿದ ಮೌಲ್ಯಗಳನ್ನು ಕೈಬಿಡದ ಸ್ವಭಾವದ ಶ್ರೀಯುತರು ಆತಿಥ್ಯ ಸಂಸ್ಕೃತಿ ಪ್ರಿಯಾರಾಧಕರು.

ನಾಡೋಜ ಪ್ರಶಸ್ತಿ ಪುರಸ್ಕೃತರಾಗುತ್ತಿರುವ ಪ್ರೊ. ಕೆ.ಜಿ. ನಾಗರಾಜಪ್ಪನವರಿಗೆ ಶ್ರೀ ಸಿದ್ಧಗಂಗಾ ಗುರುಪರಂಪರೆ ಸಕಲ ಸನ್ಮಂಗಳವನ್ನು ಅನುಗ್ರಹಿಸಲೆಂದು 'ಸಿದ್ಧಗಂಗಾ' ಹಾರೈಸುತ್ತದೆ.

# ಬಸವ ಜಯಂತಿ ಆಚರಣೆಯ ಇತಿಹಾಸ

–ಪಂ. ಚನ್ನಪ್ಪ ಎರೇಸೀಮೆ *

ವಿಶ್ವದ ಮೊಟ್ಟಮೊದಲ ವಿಚಾರವಾದಿ, ಆರ್ಥಿಕ ತಜ್ಞ, ಧಾರ್ಮಿಕ ಮಹಾಪುರುಷ ಬಸವಣ್ಣನವರ ಜನ್ಮದಿನೋತ್ಸವದಂದು ಕರ್ನಾಟಕದಾದ್ಯಂತ, ಭಾರತದ ಅನೇಕ ಕಡೆ, ವಿಶ್ವದ ಅನೇಕ ಭಾಗಗಳಲ್ಲಿ ಆಚರಿಸಲ್ಪಡುತ್ತಿದ್ದು; ಆ ವಿಭೂತಿ ಪುರುಷನ ಅಮರ ಸಂದೇಶಗಳು ದಿಗಂತವಿಶ್ರಾಂತಗೊಳ್ಳುತ್ತಿರುವುದು, ಜಗತ್ತಿನ ಅನೇಕ ವಿಚಾರವಾದಿಗಳ ಗಮನ ಸೆಳೆಯಲು ಸಹಕಾರಿಯಾಗಿದೆಯಷ್ಟೆ. ಈ ಜಯಂತಿಯನ್ನು ಸಮಾಜದಲ್ಲಿ ಸಾರ್ವತ್ರಿಕಗೊಳಿಸಲು ಹೆಣಗಿದವರಾರು? ಎಂದಿನಿಂದ ಈ ಜಯಂತಿಯನ್ನಾಚರಿಸುವುದು ರೂಢಿಯಲ್ಲಿ ಬಂದಿತು? ಎಂಬುದನ್ನು ವಿಚಾರ ಮಾಡಲು ತೊಡಗಿದಾಗ ಕೆಲವು ಸ್ವಾರಸ್ಯಕರ ಅಂಶಗಳು ಗೋಚರಿಸುತ್ತವೆ. ಈ ವಿಷಯವನ್ನು ನಮ್ಮ ಓದುಗರಿಗೆ ಪರಿಚಯ ಮಾಡಿಕೊಡುವ ಉದ್ದೇಶವೇ ಪ್ರಕೃತ ಈ ಕಿರುಬರವಣಿಗೆಯ ಪ್ರಾರಂಭ.

ಬಸವಜಯಂತಿಯ ಆಚರಣೆ ಸಮಾಜದಲ್ಲಿ ರೂಡಿ ಮೂಲವಾಗುವ ಹಾಗೆ ಶ್ರಮಿಸಿದವರು ಮುಖ್ಯವಾಗಿ ಪುಣ್ಯ ಶ್ಲೋಕರಾದ ಬನವಾಸಿಯ ದಿ॥ ಶ್ರೀ ಹರ್ಡೇಕರ ಮಂಜಪ್ಪ ಮತ್ತು ಧಾರವಾಡದ ಮುರುಘಾಮಠದ ತಪಸ್ವಿ ಲಿಂ.ನಿ.ಪ್ರ ಮೃತ್ಯುಂಜಯಸ್ವಾಮಿಗಳೆಂಬುದು ಬಹುಜನಕ್ಕೆ ಗೊತ್ತಿರಲಿಕ್ಕಿಲ್ಲ.

ಕನ್ನಡ ನಾಡು, ನುಡಿ, ಸಮಾಜ, ಸಂಸ್ಕೃತಿ, ಧರ್ಮಗಳಿಗಾಗಿ ತಮ್ಮ ನಿಡುಬಾಳನ್ನೇ ಧಾರೆಯೆರೆದು ಮಹಾಸೇವೆ ಮಾಡಿದ ಶ್ರೀ ಹರ್ಡೇಕರ ಮಂಜಪ್ಪನವರು ಅತ್ಯಂತ ಸಂಘಟನಾ ಚತುರರು. ತಮ್ಮ ನಿಸ್ಪೃಹ ಸೇವಾಮನೋಭಾವದಿಂದ ಅಂದಿನ ತರುಣ ಜನಾಂಗದ ಮೇಲೆ ಪ್ರಭಾವ ಮುದ್ರೆಯನ್ನೊತ್ತಿದವರು. ಅನೇಕ ರಚನಾತ್ಮಕ ಕಾರ್ಯಕ್ರಮಗಳನ್ನು ಹಮ್ಮಿಕೊಂಡು, ಅವಕ್ಕಾಗಿ ಅವಿರತ ಶ್ರಮಿಸಿ ಯಶಸ್ಸಂಪಾದಿಸಿದವರು; ಶರಣ್ಣ ಸಹಜ ಜೀವನ ಸಾಗಿಸಿದವರು; ಶುದ್ಧಿಯಿಂದ ಸಿದ್ಧಿಯನ್ನೂ ಪಡೆದವರು.

ಶ್ರೀಯುತರು ೧೯೧೩ನೆಯ ಇಸ್ವಿಯಲ್ಲಿ ದಾವಣಗೆರೆಯಲ್ಲಿಯೇ ಇರುತ್ತಿದ್ದು, ಅಲ್ಲಿ ತಮ್ಮ ಬಹುಮುಖ ಸಮಾಜ ಸೇವಾಕಾರ್ಯತತ್ಪರರಾಗಿದ್ದರು. ಅಲ್ಲಿನ ವಿರಕ್ತಮಠ ಅವರ ಸೇವಾಕ್ಷೇತ್ರವಾಗಿತ್ತು. ಆಗ ನಿ.ಪ್ರ.ಶ್ರೀ ಮೃತ್ಯುಂಜಯಸ್ವಾಮಿಗಳೇ ಆ ಮಠಾಧ್ಯಕ್ಷರಾಗಿದ್ದರು. ಮಂಜಪ್ಪನವರ ಯೋಜನೆ, ಯೋಚನೆ, ಚಟುವಟಿಕೆಗಳಿಗೆಲ್ಲ ಶ್ರೀಗಳವರ ಶ್ರೀರಕ್ಷೆಯೇ ವಜ್ರಕವಚವಾಗಿತ್ತು. ಆದರೂ ಮಂಜಪ್ಪನವರು ದಾವಣಗೆರೆಯಲ್ಲಿಯೇ ಕಡೆಯ ತನಕ ಉಳಿಯದೆ, ಬೇರೊಂದು ಕಡೆ ಒಂದು ಆಶ್ರಮ ತೆರೆದು ಅಲ್ಲಿ ರಚನಾತ್ಮಕ ಕಾರ್ಯಕ್ರಮಗಳನ್ನು ನಡೆಸಲು ತವಕಪಡುತ್ತಿದ್ದರು. ಅವರ ಮನಸ್ಸನ್ನು ಸೆಳೆದ ಸ್ಥಾನವೆಂದರೆ ಹರಿಹರದ ಹತ್ತಿರದಲ್ಲಿನ ತುಂಗಭದ್ರಾ ತೀರ. ಅಲ್ಲಿ ಆಶ್ರಮ ಸ್ಥಾಪಿಸುವುದು ಅವರಿಗೆ ಸುಲಭ ಸಾಧ್ಯವಾದ ಕಾರ್ಯವಾಗಿರಲಿಲ್ಲ. ಈ ರೀತಿಯ ಹೊಯ್ದಾಟದ ಸಮಯದಲ್ಲಿ ಅಷ್ಟು ಇಷ್ಟು ಸಮಾಜ ಸೇವಾಕಾರ್ಯಗಳನ್ನು ದಾವಣಗೆರೆಯಲ್ಲಿಯೇ ಇದ್ದು ನಡೆಸುತ್ತಿದ್ದರು. ಬಸವೇಶ್ವರರ ವಚನಗಳನ್ನು ಓದಿ ಅವನ್ನು ಅರ್ಥಮಾಡಿಕೊಳ್ಳುವುದು, ಅವುಗಳ ಬಗೆಗೆ ಪ್ರವಚನ ಮಾಡುವುದು–ಇವರ ಮುಖ್ಯವಾದ ಆಗಿನ ಕೆಲಸವಾಗಿತ್ತು. ಒಮ್ಮೆ ಇದ್ದಕ್ಕಿದ್ದಂತೆ ಅವರಿಗೊಂದು ಯೋಚನೆ ಹೊಳೆಯಿತು. ಶ್ರೀರಾಮ ಜನ್ಮದಿನೋತ್ಸವದ ಆಚರಣೆಯನ್ನು ಕಂಡು, ಇದರ ಹಾಗೆ ಬಸವಣ್ಣನವರ ಜಯಂತ್ಯುತ್ಸವವನ್ನು ಏಕೆ ಆಚರಿಸಬಾರದು? ಎಂಬುದೇ ಆ ಯೋಚನೆ. ಮನಸ್ಸಿನ ಮುಂದೆ ಈ ಒಂದು ಪವಿತ್ರ ಕಾರ್ಯವನ್ನಾಚರಿಸುವ ಸಂಕಲ್ಪ ಹೊಳೆಯಿಯೋ ಇಲ್ಲವೋ, ಕರ್ಮಕೌಶಲದ ಪಕ್ಷಿ ಗರಿಬಿಚ್ಚಿ ಸುತ್ತುತ್ತ ಹಾರಾಡತೊಡಗಿತು. ಶ್ರೀ ಸ್ವಾಮಿಗಳವರಿಗೆ, ದಾವಣಗೆರೆಯ ಆಗಿನ ಅವರ ವಿಶ್ವಾಸಿ ಮುಖಂಡರಾದ ಕಂಚಿಕೆರೆ ಮಹಾಲಿಂಗಪ್ಪನವರಿಗೆ ತಿಳಿಸಿದರು. ಅವರು ಮಂಜಪ್ಪನವರ ಈ ಅಭಿಪ್ರಾಯವನ್ನು ಅನುಮೋದಿಸಿದರು.

ಮಂಜಪ್ಪನವರ ಸಂಕಲ್ಪಶಕ್ತಿ ಬಹಳ ಪ್ರಬಲವಾದದ್ದು; ಸತ್ವಪೂರ್ಣವಾದದ್ದು; ಯಾವ ಸಂಕಲ್ಪವನ್ನೇ ಅವರು

* ನಂ. 597, 7ನೇ ಮುಖ್ಯರಸ್ತೆ, 2ನೇ ಕ್ರಾಸ್, ವಿಜಯನಗರ, ಬೆಂಗಳೂರು–560 040.





ಮಾಡಲಿ, ಅದು ಕಾರ್ಯರೂಪಕ್ಕೆ ಬರುತ್ತಿತ್ತೆಂಬುದಕ್ಕೆ ಅವರು ಜೀವನದಲ್ಲಿ ಸಾಧಿಸಿದ ಅನೇಕ ಸಾಧನೆಗಳೇ ಸಾಕ್ಷಿಯಾಗಿವೆ. ಮಂಜಪ್ಪನವರಿಗೆ ಬಸವಜಯಂತಿಯ ಆಚರಣೆಯ ಸಂಕಲ್ಪ ದಿನೇ ದಿನೇ ಪ್ರಬಲವಾಗತೊಡಗಿತು. ಆಚರಣೆಗೆ ದಾವಣಗೆರೆಯನ್ನೇ ಸಿದ್ಧಗೊಳಿಸತೊಡಗಿದರು. ಆದರೆ ಎಂದು ಆಚರಿಸಬೇಕೆಂಬ ಬಗ್ಗೆ ಜಿಜ್ಞಾಸೆ ಪ್ರಾರಂಭವಾಯಿತು. ಕಂಚಿಕೆರೆ ಮಹಾಲಿಂಗಪ್ಪನವರು–'ಜ್ಯೇಷ್ಠ ಬಹುಳ ಅಮಾವಾಸ್ಯೆಯಂದು ಈ ಭಾಗದಲ್ಲೆಲ್ಲ ಮಣ್ಣೆತ್ತಿನ ಹಬ್ಬವನ್ನು ಆಚರಿಸುತ್ತಾರೆ. ಬಹುಶಃ ಅದೇ ದಿನವೇ ಬಸವೇಶ್ವರರು ಹುಟ್ಟಿರಬೇಕು. ಆ ದಿನದಂದೇ ಬಸವಜಯಂತಿಯನ್ನು ಆಚರಿಸೋಣ' ಎಂದರು. ಶ್ರೀ ಮಂಜಪ್ಪನವರಿಗೆ ಈ ಸಲಹೆ ಒಪ್ಪಿಗೆಯಾಗಲಿಲ್ಲ. ಮಣ್ಣಿನಿಂದ ಎತ್ತುಗಳನ್ನು ಮಾಡಿ ಪೂಜಿಸುವುದಕ್ಕೂ ಬಸವೇಶ್ವರರಿಗೂ ಏನು ಸಂಬಂಧ? ಎಂದು ಅವರಿಗೆ ತಿಳಿಸಿ, ಬಸವಣ್ಣನವರು ಹುಟ್ಟಿದ ದಿನ ಯಾವುದಾಗಿರಬಹುದು? ಎಂಬ ವಿಷಯದ ಬಗೆಗೆ ವಿದ್ವಾಂಸರೊಡನೆ ಸಮಾಲೋಚನೆ ಮಾಡಲು ಅವರ ಮನಸ್ಸು ದಶದಿಕ್ಕುಗಳಿಗೂ ಹರಿಯಿತು. ಒಂದು ದಿನ ದಾವಣಗೆರೆಯಲ್ಲಿಯೇ ಇದ್ದ ಶ್ರೀ ಚಂದ್ರಶೇಖರ ಶಾಸ್ತ್ರಿಗಳೆಂಬುವರಲ್ಲಿಗೆ ನಿಡಗುಂದಿ ಮಡಿವಾಳಪ್ಪನವರೊಡನೆ ಹೋಗಿ ತಮ್ಮ ಅಭಿಪ್ರಾಯವನ್ನು ಮಂಡಿಸಿದರು. ಶಾಸ್ತ್ರಿಗಳು 'ಬಸವೇಶ್ವರರ ಜನ್ಮದಿನವು ಎಲ್ಲಿಯೂ ಸಿಕ್ಕುವುದಿಲ್ಲ. ಅದಕ್ಕಾಗಿ ಏಕೆ ಇಷ್ಟು ತಲೆ ಕೆಡಿಸಿಕೊಳ್ಳುತ್ತೀರಿ. ಅದಕ್ಕಿಂತ ರೇಣುಕ ಜಯಂತಿಯನ್ನು ಮಾಡುವುದೇ ಒಳ್ಳೆಯದು' ಎಂದು ಹೇಳಿಕಳಿಸಿಬಿಟ್ಟರು. ಹಾಗೆ ಅವರು ಏಕೆ ಹೇಳಿದರೆಂಬುದು ಮಂಜಪ್ಪನವರಿಗೆ ತಿಳಿಯಲೇ ಇಲ್ಲವಂತೆ. ಶಾಸ್ತ್ರಿಗಳು ಕಾಶಿಯಲ್ಲಿ ದೀರ್ಘಕಾಲ ಇದ್ದು ವಿದ್ಯಾಭ್ಯಾಸ ಮಾಡಿ ಹಿಂತಿರುಗಿ ಬಂದವರಂತೆ, ಅದೇನೆ ಇರಲಿ.

ಮಂಜಪ್ಪನವರು ಮುಂದೇನು ಮಾಡುವುದು? ಯಾರನ್ನು ಕೇಳುವುದು ಎಂದು ಯೋಚಿಸುತ್ತಿದ್ದಂತೆ ಮೈಸೂರಿನ ಪ್ರಸಿದ್ಧ ವಿದ್ವಾಂಸರಾಗಿದ್ದ ಶ್ರೀ ಎನ್.ಆರ್. ಕರಿಬಸವಶಾಸ್ತ್ರಿಗಳ ನೆನಪಾಗಿ ಅವರಿಗೊಂದು ಕಾಗದ ಬರೆದು ತಮ್ಮ ಉದ್ದೇಶಗಳನ್ನೆಲ್ಲ ತಿಳಿಸಿದರು. ಶಾಸ್ತ್ರಿಗಳು 'ಸಂಸ್ಕೃತ ಬಸವಪುರಾಣ'ದಲ್ಲಿ ಉಕ್ತವಾದ ಬಸವಣ್ಣನವರ ಜನ್ಮಕಾಲದ ಗ್ರಹಗತಿಗಳನ್ನು ಸೂಚಿಸುವ–

*ಮಿನಸ್ಥಿತೇ ಭೃಗೋ ಪುತ್ರೇ । ಮೇಷಸ್ಥೇ ಚ ದಿವಾಕರೇ।*
*ತುಲಾಸ್ಥಿತೇ ತತ್ಪುತ್ರೇ । ಕರ್ಕಾಟಕಸ್ಥೇ ಬೃಹಸ್ಪತೌ ॥*
*(ಅ.೪; ಶ್ಲೋ.೩೪)*

***ಶಶಾಂಕೇ ರೋಹಿಣೀ ಸಂಸ್ಥೇ। ಮಕರಸ್ಥೇ ಭೂಸುತೇ।***
***ಶಿಶೋರರ್ಧೋದಯೇ ಜಾತೇ।ಲಗ್ನ ಕರ್ಕಟ ಸಂಜ್ಞಿಕೇ।***

–ಈ ಶ್ಲೋಕವನ್ನೂ ಇದರ ಅರ್ಥವನ್ನೂ ಬರೆದು ಕಳಿಸಿದರಂತೆ. ಇದರ ಪ್ರಕಾರ ಗ್ರಹಗತಿ ಏರ್ಪಡುವುದು ಹೀಗೆ;

| ಶು | ರ | ಚ | |
|---|---|---|---|
| | | | ಗು |
| ಕು | | | |
| | | ಶ | |

ಈ ಶ್ಲೋಕದ ಪ್ರಕಾರವಾಗಿ ಕುಂಡಲಿ ಹಾಕಿ ಬಸವಣ್ಣನವರ ಜನನ ಕಾಲವನ್ನು ಗೊತ್ತುಮಾಡಿ ಕಳಿಸಲಿಕ್ಕೆ ಆಗಿನ ಜ್ಯೋತಿಷಿ ಹರಪನಹಳ್ಳಿ ಆರ್. ಶಾಂತಪ್ಪಾಜಿಯರಲ್ಲಿ ಬಿನ್ನವಿಸಿಕೊಂಡರಂತೆ. ಶಾಂತಪ್ಪಾಜಿಯವರು ಮೇಲಿನ ಶ್ಲೋಕಾಧಾರವನ್ನನುಸರಿಸಿ–

| ಶು | ರ–ಬು | ಚ | ರಾ |
|---|---|---|---|
| | | | ಲ ಗು |
| ಕುಜ | | | |
| ಕೇತು | | ಶನಿ ವಕ್ರ | |

–ಹೀಗೆ ಕುಂಡಲಿ ಹಾಕಿ ಶಾಲಿವಾಹನ ಶಕೆ ೧೦೩೭ನೆಯ ಮನ್ಮಥನಾಮ ಸಂವತ್ಸರ ವೈಶಾಖ ಶುದ್ಧ ೪, ಶನಿವಾರ ಸೂರ್ಯೋದಯದ ನಂತರ ಜನನ ಕಾಲ ಘಟಿಕಾ ೧೪–೨೪, ಕರ್ಕಾಟ ಲಗ್ನ ರೋಹಿಣೀ ನಾಲ್ಕನೆಯ ಚರಣದಲ್ಲಿ ಶ್ರೀ ಬಸವೇಶ್ವರರ ಜನನವೆಂದು ತಿಳಿಸಿದರು. ಇದರ ಮೇಲಿಂದ ಬಸವಣ್ಣನವರ ಜನನ ಕ್ರಿ.ಶ. ೧೧೧೫ನೆಯ ಇಸ್ವಿ ಎಂದು ಸಿದ್ಧವಾಗುವುದು. ಆದರೆ ಇತ್ತೀಚಿನ ವಿದ್ವಾಂಸರು ಕ್ರಿ.ಶ. ೧೧೩೨ಎಂದು ಒಂದು ನಿರ್ಣಯಕ್ಕೆ ಬಂದಿರುವುದರಿಂದ ಈ ೧೭ ವರ್ಷಗಳ ಹೆಚ್ಚು ಕಡಿಮೆಯ ಬಗೆಗೆ ಇತಿಹಾಸತಜ್ಞರು ಕಾರಣ ಹುಡುಕಬೇಕಾಗಿದೆ.

ವರ್ಷದ ವಿಷಯವೇನೇ ಇರಲಿ, ವೈಶಾಖ ಶುದ್ಧದಲ್ಲಿ ಬರುವ ರೋಹಿಣೀ ನಕ್ಷತ್ರದಲ್ಲಿ ಬಸವಜಯಂತಿಯನ್ನು ಆಚರಿಸುವುದೆಂದು ಮಂಜಪ್ಪನವರು ತೀರ್ಮಾನಿಸಿ ಶ್ರೀ ಮೃತ್ಯುಂಜಯಸ್ವಾಮಿಗಳನ್ನೂ ದಾವಣಗೆರೆಯ ಪ್ರಮುಖರನ್ನೂ ಒಪ್ಪಿಸಿ 'ಶುಭಸ್ಯಶೀಘ್ರಂ' ಎಂಬಂತೆ, ದಾವಣಗೆರೆಯಲ್ಲಿ ಅದೇ ವರ್ಷವೇ ಅಂದರೆ ೧೯೧೩ರಲ್ಲಿಯೇ ಬಸವಜಯಂತಿಯ ಉತ್ಸವವನ್ನು ವಿದ್ಯುಕ್ತವಾಗಿ ನಡೆಸಿಬಿಟ್ಟರು. ಕಾಲಾವಕಾಶವೇ ಇಲ್ಲದ್ದರಿಂದ ಬೇರೆ ಕಡೆಗೆ ಪ್ರಚಾರ ಮಾಡಲಾಗಲಿಲ್ಲ. ಮುಂದೆ ಪ್ರತಿವರ್ಷವೂ ವೈಶಾಖ ಶುದ್ಧದಲ್ಲಿ ಬರುವ ರೋಹಿಣೀ ನಕ್ಷತ್ರವೇ ಬಸವ ಜಯಂತ್ಯುತ್ಸವದ ದಿನವೆಂದು ಗೊತ್ತು ಮಾಡಲಾಯಿತು. ಈ ಬಗ್ಗೆ ನಾನಾ ವಿಧವಾದ ಪ್ರಚಾರಕಾರ್ಯವೂ ನಡೆಯಿತು.

ಮುಂದೆ ಮಂಜಪ್ಪನವರೂ, ಶ್ರೀ.ನಿ.ಪ್ರ. ಮೃತ್ಯುಂಜಯ ಮಹಾಸ್ವಾಮಿಗಳೂ ಈ ಜಯಂತಿಯು ಸಾರ್ವತ್ರಿಕವಾಗಿ ಹರಡಿ ಒಂದು ರಾಷ್ಟ್ರೀಯ ವ್ಯಾಪ್ತಿಯನ್ನು ಪಡೆಯಲು ಬಹುವಾಗಿ ಶ್ರಮಿಸಿದರು. ಬಸವಣ್ಣನವರ ಬಗೆಗೆ ಅನೇಕ ವಿದ್ವಾಂಸರಿಂದ ಲೇಖನಗಳನ್ನು ಬರೆಯಿಸಿ ಪತ್ರಿಕೆಯಲ್ಲಿ ಪ್ರಸಾರಗೊಳ್ಳುವಂತೆ ಮಾಡಿದರು. ಬಸವಣ್ಣನವರ ವಚನಗಳನ್ನು ಮುದ್ರಿಸಿ ಜನತೆಯಲ್ಲಿ ಹಂಚುವ ಕಾರ್ಯಕ್ರಮಗಳು ನಡೆದುವು. ಮೃತ್ಯುಂಜಯಸ್ವಾಮಿಗಳವರ ದಿವ್ಯಪ್ರಭಾವ, ಮಂಜಪ್ಪನವರ ಕರ್ತೃತ್ವ ಶಕ್ತಿ, ಜನತೆಯ ಉತ್ಸಾಹಗಳ ಮುಪ್ಪರಿಯ ಪರಿಣಾಮವಾಗಿ ವರ್ಷೇ ವರ್ಷೇ ಈ ಜಯಂತಿಯ ಕಾರ್ಯಕ್ರಮಗಳು ಪ್ರಸಾರಗೊಳ್ಳಲು ಅವಕಾಶವಾಯಿತು. ವೈಶಾಖ ಶುದ್ಧದಲ್ಲಿ ಬರುವ ರೋಹಿಣೀ ನಕ್ಷತ್ರದಲ್ಲಿ ಅಲ್ಲಲ್ಲಿ ರಥೋತ್ಸವಗಳು, ಜಯಂತಿಯ ಬಗೆಗೆ ಸಭೆ-ಸಮ್ಮೇಳನಗಳು, ಪುರಾಣ, ಕೀರ್ತನೆ, ಪ್ರವಚನಗಳು ನಡೆಯತೊಡಗಿದವು. ಎತ್ತುಗಳ ಮೆರವಣಿಗೆ ನಡೆಯತೊಡಗಿತು. ಬಸವಜಯಂತಿಯೆಂದರೆ ಎತ್ತುಗಳ ಮೆರವಣಿಗೆಯೆಂದು ಹಳ್ಳಿಗಳಲ್ಲಿ ಆಚರಿಸುತ್ತಿದ್ದುದೂ ಉಂಟು. ಬರಬರುತ್ತ ಈ ಪದ್ಧತಿ ಮಾಯವಾಗಿ ಬಸವಣ್ಣನವರ ದಿವ್ಯಾದರ್ಶಗಳ ಪ್ರಚಾರ ನಡೆಯಹತ್ತಿತ್ತು. ಬಸವಣ್ಣ ನಂದಿಯ ಅವತಾರವೆಂದು ತಿಳಿದು ನಂದಿಯ ಸಂಕೇತವಾದ ಎತ್ತಿನ ಮೆರವಣಿಗೆ ರೈತವರ್ಗದಿಂದ ನಡೆಯುತ್ತಲೇ ಬಂತು.

ಹೈದರಾಬಾದು ಕರ್ನಾಟಕದಲ್ಲಿ ೧೯೨೨ನೆಯ ಇಸವಿಯವರೆಗೆ ಬಸವ ಜಯಂತಿಯ ಸುಳಿವೇ ಇರಲಿಲ್ಲ. ಶ್ರೀ.ನಿ.ಪ್ರ.ಶಾಂತವೀರಸ್ವಾಮಿಗಳು ಗುರುಕಲ್‌ಮಠ ಅವರ ಮತ್ತು ೧೯೨೨ರಲ್ಲಿ ಯಾದಗಿರಿಯ ಸಂಸ್ಕೃತ ಪಾಠಶಾಲೆಗೆ ಅಧ್ಯಾಪಕರಾಗಿ ಬಂದ ಚಂದ್ರಶೇಖರಶಾಸ್ತ್ರಿಗಳವರ ಪ್ರಚಾರದ ಪರಿಣಾಮವಾಗಿ ಅಲ್ಲಿಯೂ ಬಸವ ಜಯಂತಿ ಕಾರ್ಯಕ್ರಮ ಪ್ರಾರಂಭವಾಯಿತು. ಆ ದಿನದಂದು ಬಸವಣ್ಣನವರ ಮುದ್ರಿತ ವಚನಗಳ ಕಿರುಹೊತ್ತಿಗೆಗಳನ್ನು ಹಂಚುವುದು, ಅವರ ಬಗೆಗೆ ಗ್ರಂಥಗಳನ್ನು ಪ್ರಕಟಿಸುವುದು, ಪತ್ರಿಕೆಗಳಿಗೆ ತತ್ಸಂಬಂಧವಾದ ಲೇಖನ ಬರೆಯುವುದು ಈ ಕಾರ್ಯವನ್ನು ಚಂದ್ರಶೇಖರಶಾಸ್ತ್ರಿಗಳು ಮಾಡಿ ಗಣನೀಯ ಸೇವೆ ಸಲ್ಲಿಸಿದುದನ್ನು ಇಲ್ಲಿ ಸ್ಮರಿಸಲೇಬೇಕು.

ಈ ಎಲ್ಲ ಹಿರಿಯ ಮುಖಂಡರ ನೂತನೋತ್ಸಾಹದಿಂದ ಪ್ರಾರಂಭಗೊಂಡು ಬೆಳೆಯುತ್ತ ಬಂದ 'ಬಸವ ಜಯಂತಿ'ಯ ಆಚರಣೆ ಇಂದು ಜಗತ್ತಿನ ಅನೇಕ ಭಾಗಗಳಲ್ಲಿ ಆಚರಿಸುವಂತಾಗಿದೆ. ಇತ್ತೀಚೆಗೆ ಈ ದೆಸೆಯಲ್ಲಿ ಬೆಂಗಳೂರಿನ ಬಸವ ಸಮಿತಿ ತನ್ನ ಪಾಲಿನ ಕಾರ್ಯವನ್ನು ಗಣನೀಯವಾಗಿ ಸಲ್ಲಿಸುತ್ತಿರುವುದು ಸಂತೋಷಪ್ರದವಾದುದು. ದಿವ್ಯ ವಿಭೂತಿ ಪುರುಷನಾದ ಬಸವಣ್ಣನ ತತ್ತ್ವಗಳು ವಿಶ್ವಾದ್ಯಾಂತ ಇಂದು ಹರಡಿ, ಅನೇಕ ದೃಷ್ಟಿಕೋನಗಳಿಂದ ಅವರ ಅಮರ ಸಂದೇಶಗಳಾದ ವಚನಗಳ ಬಗೆಗೆ, ಅಂದಿನ ದಿನಗಳಲ್ಲಿ ಅವನು ತಂದ ಆರ್ಥಿಕ, ಸಾಮಾಜಿಕ, ಧಾರ್ಮಿಕ ಕ್ರಾಂತಿಯ ಬಗೆಗೆ ವಿದ್ವಾಂಸರು, ತತ್ತ್ವವೇತ್ತರು ಆಲೋಚಿಸುವಂತಾಗಿದೆ. ಅವರ ವಚನಗಳ ಉದ್ದಗಲ ಆಳಕ್ಕೆ ಮುಳುಗಿ ಅರ್ಥೈಸಿ ಜನಾಂಗದ ಕಣ್ಣನ್ನು ತೆರೆಯಿಸುವ ಸಮಯವೀಗ ಎಂದಿಗಿಂತ ಹೆಚ್ಚಾಗಿದೆ. ವಿಶ್ವವಿಭೂತಿ ಪುರುಷರೆನಿಸಿ ಬಹುಮುಖ ಕ್ರಾಂತಿಯನ್ನು ೧೨ನೆಯ ಶತಮಾನದಲ್ಲಿ ಮಾಡಿ ಜನರ ವಿಚಾರಧಾರೆಯ ದಿಕ್ಕನ್ನೇ ಬದಲುಗೊಳಿಸಿದ ಬಸವೇಶ್ವರನ ಅಮರ ತತ್ವಗಳನ್ನು ಅನುಸರಿಸುವುದಾದರೆ ಭೂತಾಕಾರವಾಗಿ ಬೆಳೆದು ನಿಂತಿರುವ ವಿಶ್ವದ ಇಂದಿನ ಅನೇಕ ಸಮಸ್ಯೆಗಳಿಗೆ ಪರಿಹಾರ ದೊರೆಯುವಲ್ಲಿ ಯಾವ ಪ್ರತ್ಯವಾಯವೂ ಇಲ್ಲ.

ಕೃಪೆ: ಬೆಳ್ಳಿ ಬೆಳಗು ❖





# ಶ್ರೀ ಬಸವೇಶ್ವರರ ಮಾನವತಾವಾದ : ಒಂದು ವಿಶ್ಲೇಷಣೆ

-ಡಾ॥ ಎಚ್.ಎಂ. ರಾಜಶೇಖರ *

'ಕ್ರಿ.ಶ. ೧೨ನೇ ಶತಮಾನ ಕರ್ನಾಟಕದಲ್ಲಿ ಅನೇಕ ಮಹಾಪುರುಷರ ಮತ್ತು ಸಮಾಜ ಸುಧಾರಕರ ಕಾಲವಾಗಿ, ಇತಿಹಾಸ ಪುಟಗಳಲ್ಲಿ ಗುರುತಿಸಲ್ಪಟ್ಟಿತು. ಅಜ್ಞಾನ, ಅಂಧಕಾರ, ಅವೈಜ್ಞಾನಿಕ ಚಿಂತನೆ ಮತ್ತು ಮೌಢ್ಯತೆ ತಾಂಡವವಾಡುತ್ತಿದ್ದ ಮಧ್ಯಯುಗದ ಈ ಶತಮಾನದಲ್ಲಿ ಅಲ್ಲಮಪ್ರಭು, ಬಸವಣ್ಣ, ಅಕ್ಕಮಹಾದೇವಿ ಮುಂತಾದ ಶಿವಶರಣ-ಶರಣೆಯರು ಜನ್ಮತಾಳಿ ಬೆಳಕನ್ನು ಚೆಲ್ಲಿದರು ಹಾಗೂ ಸಮಾಜವನ್ನು ಬೆಳಗಿದರು. ಇವರ ಮಾನವೀಯತೆ ಮೌಲ್ಯಗಳು, ಸಮಾಜದ ಅರಿವು, ವಿದ್ವತ್ತು, ವಿಶಾಲ ಹಾಗೂ ಹಾಗೂ ವೈಜ್ಞಾನಿಕ ಮನೋಭಾವನೆ, ಅನುಕಂಪೆ, ಕರುಣೆ, ಸಾಮಾಜಿಕ ಕಳಕಳಿ ಮುಂತಾದ ಉದಾತ್ತ ಗುಣಗಳು ಕತ್ತಲ ಸಮಾಜದ ಸುಧಾರಣೆಗೆ ಮತ್ತು ಬದಲಾವಣೆಗೆ ಪೂರಕವಾದವು. ಬಸವಣ್ಣ ಮತ್ತು ಅವರ ಸಮಕಾಲೀನ ಶಿವಶರಣರು ಚಿಂತನೆ ಮತ್ತು ಕಾರ್ಯಗಳಲ್ಲಿ ತಮ್ಮ ಕಾಲಕ್ಕಿಂತ ಮುಂದಿದ್ದರು. ಈ ಒಂದು ಸಂಕ್ಷಿಪ್ತ ಲೇಖನದಲ್ಲಿ ಬಸವಣ್ಣನವರ ಮಾನವತಾವಾದವನ್ನು ವಿಶ್ಲೇಷಿಸಲಾಗಿದೆ.



ವಿಶ್ವಗುರು ಬಸವಣ್ಣನವರು

ಬಾಲ್ಯದಿಂದಲೇ ಬಸವಣ್ಣನವರು ಶಿಸ್ತು, ಸಂಯಮ, ನಿಯಮಪಾಲನೆ, ಸ್ವಚ್ಛತೆ, ಪ್ರಾಮಾಣಿಕತೆ, ಮಾನವೀಯತೆ, ಸಮಾನತೆ ಮುಂತಾದುವುಗಳ ಬಗ್ಗೆ ಒಲವು ತೋರಿಸಿ, ಅವುಗಳನ್ನು ಬೆಂಬಲಿಸಿದರು ಮತ್ತು ಅನುಸರಿಸಿದರು. ಸುಂದರವಾದ ದೇಹ ಮತ್ತು ಆರೋಗ್ಯಕರ ಮನಸ್ಸನ್ನು ಹೊಂದಿದ್ದ ಇವರು ತೇಜಸ್ವಿ ರೂವಾರಿಯಾಗಿ ತಮ್ಮ ಜೀವನವನ್ನು ಸಮಾಜಕ್ಕೆ ಅರ್ಪಿಸಿದರು. ಇವರ ಜನಪ್ರಿಯತೆ ಉತ್ತುಂಗಕ್ಕೇರಿ **'ಎಲ್ಲ ಬಲ್ಲಿದನಯ್ಯ ಕಲ್ಯಾಣ ಬಸವಯ್ಯ; ಚೆಲ್ಲಿದನು ತಂದು ಶಿವಬೆಳಕ ನಾಡೊಳಗೆ ಸೊಲ್ಲೆತ್ತಿ ಜನವು ಹಾಡುವುದು'** ಎಂದು ಪ್ರಜೆಗಳು ಕೊಂಡಾಡಿದರು. ಬುದ್ಧನಂತೆ ದಯಾವಂತನಾಗಿ, ಮಹಾವೀರನಂತೆ ಸರಳ ಜೀವಿ ಹಾಗೂ ಹಾಗೂ ಅಹಿಂಸಾವಾದಿಯಾಗಿ, ಕ್ರೈಸ್ತನಂತೆ ಉದಾರಿಯಾಗಿ ಮತ್ತು ಮಹಮ್ಮದ್ ಪೈಗಂಬರನಂತೆ ಧೈರ್ಯಶಾಲಿಯಾಗಿ, ಅಂಧಕಾರ ಸಮಾಜದ ಅನಾಚಾರಗಳ ವಿರುದ್ಧ ಬಂಡೆದ್ದರು. ೧೨ನೇ ಶತಮಾನದ ಶಿವಶರಣರಲ್ಲಿ ಇವರೊಬ್ಬ ಮಹಾನ್ ಕ್ರಾಂತಿಕಾರಿ ಸಮಾಜ ಸುಧಾರಕರಾಗಿದ್ದರು ಎಂದರೆ ಉತ್ಪ್ರೇಕ್ಷೆಯಾಗಲಾರದು.

ಬಸವಣ್ಣನವರ ವಿವಿಧ ವಿಚಾರಧಾರೆಗಳನ್ನು ಅವರ ಜೀವನ ಶೈಲಿಯಲ್ಲಿ ಮತ್ತು ವಚನಗಳಲ್ಲಿ ಕಾಣುತ್ತೇವೆ. ಅವರ ಸರಳ ಮತ್ತು ಸಭ್ಯತೆಯ ಜೀವನ ಶೈಲಿ ಮಾನವತಾ ವಾದದ ದ್ಯೋತಕವಾಗಿದೆ. ಮಾನವೀಯತೆಯ ಪ್ರತಿಪಾದಕರು ಮತ್ತು ಆರಾಧಕರಾಗಿದ್ದ ಇವರು ಹಿಂಸೆ, ವರ್ಗಭೇದ, ವರ್ಣಭೇದ, ಜಾತಿಭೇದ, ಲಿಂಗಭೇದ ಮತ್ತು ವಯಸ್ಸಿನ ಭೇದಗಳನ್ನು ತಿರಸ್ಕರಿಸಿದರು. ಇವರ ಅಭಿಪ್ರಾಯದಲ್ಲಿ 'ಮಾನವೀಯತೆಗಿಂತ ಮಿಗಿಲಾದ ಧರ್ಮ ಬೇರೊಂದಿಲ್ಲ, ಮಾನವೀಯತೆಯೇ ಶ್ರೇಷ್ಠ ಧರ್ಮ. ದಯೆ, ಅನುಕಂಪ, ಪರೋಪಕಾರ ಭಾವನೆ, ಭ್ರಾತೃತ್ವ, ಧರ್ಮದರ್ಶಿತ್ವ ದಾಸೋಹ, ಸಮಾನತೆ, ಜಾತ್ಯಾತೀತ ಭಾವನೆ, ಸಹನೆ ಮುಂತಾದ ಶ್ರೇಷ್ಠ ಗುಣಗಳು ಮಾನವೀಯತೆಯನ್ನು ಬೆಳೆಸಿ, ಉಳಿಸಲು ಪ್ರಮುಖವಾದುವು ಎಂದು ಅಭಿಪ್ರಾಯಪಟ್ಟರು. ಮಾನವೀಯತೆಯುಳ್ಳ ಮಾನವನಿಗೆ ಯಾವ ಧರ್ಮ ಗ್ರಂಥದ ಪಠಣವಾಗಲಿ ಅಥವಾ ದೇವರ ದರ್ಶನವಾಗಲಿ ಬೇಕಿಲ್ಲ ಎಂದು ತಿಳಿಸಿದರು. ಮಾನವೀಯತೆಗೆ ಧರ್ಮವನ್ನು ಅಡಿಗಲ್ಲಾಗಿ ಮಾಡಿ, ದಯಾಮೂಲ ಧರ್ಮವನ್ನು

* ನಿರ್ದೇಶಕರು, ಶೈಕ್ಷಣಿಕ ಸಿಬ್ಬಂದಿ ಮಹಾವಿದ್ಯಾಲಯ, ಮೈಸೂರು ವಿ.ವಿ. ಮಾನಸಗಂಗೋತ್ರಿ, ಮೈಸೂರು-೬.

ಪ್ರತಿಪಾದಿಸಿದರು. ಕೆಳಗಿನ ವಚನದಲ್ಲಿ ಅವರ ಈ ಅಭಿಮತ ಅಡಕವಾಗಿದೆ.

*ದಯವಿಲ್ಲದ ಧರ್ಮವಾವುದಯ್ಯ*
*ದಯವೇ ಬೇಕು ಸಕಲ ಪ್ರಾಣಿಗಳೆಲ್ಲರಲ್ಲಿ,*
*ದಯವೇ ಧರ್ಮದ ಮೂಲವಯ್ಯಾ*
*ಕೂಡಲ ಸಂಗಯ್ಯನಂತಲ್ಲದೊಲ್ಲನಯ್ಯಾ*

ಧರ್ಮವು ಮನುಷ್ಯನನ್ನು ದೈವಪುರುಷನಂತೆ ಮಾಡಬೇಕೇ ಹೊರತು, ಕ್ರೂರ ಮೃಗದಂತೆ ಮಾಡಬಾರದು. ಇದನ್ನು ಸ್ವಾರ್ಥಕ್ಕಾಗಿ ಅಥವಾ ಸಮಾಜದಲ್ಲಿ ದ್ವೇಷವನ್ನು ಹುಟ್ಟು ಹಾಕುವುದಕ್ಕಾಗಿ ಬಳಸಬಾರದು ಎಂಬ ಸೂಚನೆ ಅಡಕವಾಗಿದೆ. ಆದರೆ ದುರದೃಷ್ಟವಶಾತ್, ಪ್ರಸ್ತುತ ಸಮಾಜಗಳಲ್ಲಿ ಧರ್ಮದ ಆಧಾರದ ಮೇಲೆ ಒಡಕುಗಳು ಉಂಟಾಗಿ, ಜನರು ಮಾನವೀಯತೆಯನ್ನು ಮರೆತು, ಕಾದಾಡುತ್ತಿದ್ದಾರೆ.

ಮಾನವೀಯತೆಯ ಮತ್ತೊಂದು ಸಂಕೇತವಾದ ಅಹಿಂಸೆಯನ್ನು ಬಸವಣ್ಣನವರು ೮೦೦ ವರ್ಷಗಳ ಹಿಂದೆಯೇ ಒತ್ತಿ ಹೇಳಿದ್ದು ಸರ್ವಕಾಲಕ್ಕೂ ಸಮಂಜಸವಾಗಿದೆ. ೨೦ನೇ ಶತಮಾನದಲ್ಲಿ ಮಹಾತ್ಮಗಾಂಧೀಜಿ ಹೇಳಿದಂತೆ, ಬಸವಣ್ಣನವರು ಅಹಿಂಸೆಯನ್ನು ಧೈರ್ಯದ ಆಧಾರವೆಂದರು. ಇವರ ಅಭಿಪ್ರಾಯದಲ್ಲಿ ಹಿಂಸೆ ಭಯಾನಕವಾದುದು ಮತ್ತು ಇಡೀ ಸಮಾಜದಲ್ಲಿ ಅಲ್ಲೋಲಕಲ್ಲೋಲಗಳನ್ನು ಉಂಟುಮಾಡುತ್ತದೆ. ಹಿಂಸೆಯನ್ನು ತಡೆಯಲು ಅಹಿಂಸೆಯೇ ಬೇಕು. ಕಾಯಾ, ವಾಚಾ, ಮನಸಾ ಅಹಿಂಸಾ ವ್ರತವನ್ನು ಆಚರಿಸುವ ವ್ಯಕ್ತಿ ಮಾನವೀಯತೆಯ ಆರಾಧಕನಾಗುತ್ತಾನೆ. 'ನಮ್ಮ ಇಂದ್ರಿಯಗಳಿಗೆ ಅಹಿಂಸೆ ಎಂಬ ಉಡುಪನ್ನು ತೊಡಿಸಬೇಕು' ಎಂದು ಹೇಳಿ, 'ಕೊಲ್ಲನಯ್ಯಾ ಪ್ರಾಣಿಗಳ, ಮೆಲ್ಲನು ಬಾಯಿ ಇಚ್ಛೆಗೆ' ಎಂಬ ವಚನವನ್ನು ರಚಿಸಿದರು. ಅಹಿಂಸೆಯನ್ನು ಅನುಸರಿಸಲು, ಮಾನವ ತನ್ನ ಕೋಪ, ತಾಪ, ದ್ವೇಷ ಹಾಗೂ ಅಸೂಯೆಗಳನ್ನು ತ್ಯಜಿಸಬೇಕು. 'ದ್ವೇಷದಿಂದ ದ್ವೇಷವನ್ನು ಗೆಲ್ಲುವುದು ಸಾಧ್ಯವಿಲ್ಲ. ಬೇರೆಯವರು ಏನೇ ಮಾಡಿದರು ದ್ವೇಷಿಸಬಾರದು' ಎಂದು ಸೂಚಿಸಿದರು. ದ್ವೇಷದ ಬಗ್ಗೆ ಅವರು ರಚಿಸಿರುವ ವಚನವನ್ನು ಇಲ್ಲಿ ಉಲ್ಲೇಖಿಸುವುದು ಸೂಕ್ತವಾಗಿದೆ;

*ತನಗೆ ಮುನಿವರಿಗೆ ತಾ ಮುನಿಯಲೇಕಯ್ಯಾ?*
*ತನಗಾದ ಆಗೇನು? ಅವರಿಗಾದ ಚೇಗೆಯೇನು?*
*ತನುವಿನ ಕೋಪ ತನ್ನ ಹಿರಿಯತನದ ಕೇಡು !*
*ಮನದ ಕೋಪ ತನ್ನ ಅರಿವಿನ ಕೇಡು!*
*ಮನೆಗೊಳಗಣ ಕಿಚ್ಚು ಮನೆಯ ಸುಟ್ಟಲ್ಲದೆ*
*ನೆರೆ ಮನೆಯ ಸುಡದು ಕೂಡಲಸಂಗಮದೇವಾ!*

ಬಸವಣ್ಣನವರ ಈ ಚಿಂತನೆ ಇಂದಿನ ವಿಕೃತ ಮತ್ತು ಹಿಂಸಾತ್ಮಕ ಸಮಾಜಕ್ಕೆ ಹೆಚ್ಚು ಸಮಂಜಸವಾಗಿದೆ. ಜಾತಿ, ಕುಲ ಮತ್ತು ಧರ್ಮ ಆಧಾರಿತ ಘರ್ಷಣೆಗಳ ತಡೆಗೆ ಅಹಿಂಸೆ ಮದ್ದು ಎಂಬುದನ್ನು ಬಸವಣ್ಣನವರ ವಿಚಾರಧಾರೆಯಿಂದ ಮನದಟ್ಟಾಗುತ್ತದೆ. ಅಲ್ಲದೆ, ಇಂದಿನ ಅಣ್ವಸ್ತ್ರಗಳು ವಿವಿಧ ರಾಷ್ಟ್ರಗಳ ನಡುವೆ ಭಿನಾಭಿಪ್ರಾಯಗಳನ್ನುಂಟುಮಾಡಿ, ಅನುಮಾನ ಮತ್ತು ಕಾದಾಟಕ್ಕೆ ಕಾರಣವಾಗಿವೆ. ವಿಶ್ವಶಾಂತಿ ಮತ್ತು ವಿಶ್ವಪ್ರೇಮಕ್ಕೆ ಅಹಿಂಸೆ ಆಧಾರಿತ ಮಾನವೀಯತೆ ಮುಖ್ಯ ಎಂಬುದು ಬಸವತತ್ತ್ವದಿಂದ ತಿಳಿದು ಬರುತ್ತದೆ. ಬಸವಣ್ಣನವರ ಮಾನವೀಯತೆಯ ಪರಿಕಲ್ಪನೆಯಲ್ಲಿ ಸಕಾರಾತ್ಮಕ ಹಾಗೂ ರಚನಾತ್ಮಕ ಅಂತರರಾಷ್ಟ್ರೀಯ ಸಂಬಂಧಗಳ ಬೆಳವಣಿಗೆಗೆ ಅವಕಾಶವಿದೆ.

ವರ್ಗ, ಜಾತಿ, ಲಿಂಗ ಮತ್ತು ವರ್ಣ ಭೇದಗಳನ್ನು ಕಟುವಾಗಿ ಖಂಡಿಸಿದ ಬಸವಣ್ಣನವರು ಅಂದಿನ ಸಾಂಪ್ರದಾಯಿಕ ಹಾಗೂ ಅಂಧಕಾರಕ ಸಮಾಜದಲ್ಲಿ ಮಾನವೀಯತೆ ಗುಣಗಳನ್ನು ಅನುಭವ ಮಂಟಪದ ಮೂಲಕ ಸಾರಿದರು. 'ಆಧ್ಯಾತ್ಮಿಕ ಶಿಕ್ಷಣ ಶಾಲೆಯೆಂದು' ಜನಪ್ರಿಯವಾಗಿದ್ದ ಅನುಭವಮಂಟಪದಲ್ಲಿ ಚರ್ಚೆಗಳು, ಸಂವಾದಗಳು, ಹಾಗೂ ಉಪನ್ಯಾಸಗಳು ನಡೆದು ಇಡೀ ಸಮಾಜದ ಏಳಿಗೆಗೆ ಮುಡುಪಾಗಿತ್ತು. ಶಿಕ್ಷಣ ಹಾಗೂ ಅರಿವಿನ ಮೂಲಕ ಜನರನ್ನು ಸುಧಾರಿಸುವುದು ಬಸವಣ್ಣನವರ ಗುರಿಯಾಗಿತ್ತು. 'ಅರಿವೇ ಗುರು' ಎಂಬುದರಲ್ಲಿ ಇವರಿಗೆ ನಂಬಿಕೆ ಇತ್ತು. ಮೇಲು-ಕೀಳು ಎಂಬ ಭಾವನೆಯನ್ನು ತೆಗೆದುಹಾಕಲು, ತಮ್ಮ ಜೀವನದಲ್ಲಿ ಸಮಾನತೆಯ ತತ್ತ್ವವನ್ನು ಕಟ್ಟುನಿಟ್ಟಾಗಿ ಅನುಸರಿಸಿದರು. 'ಎನಗಿಂತ ಕಿರಿಯರಿಲ್ಲ, ಶಿವಭಕ್ತರಿಗಿಂತ ಹಿರಿಯರಿಲ್ಲ' ಎಂದು ಸಾರಿ ಹೇಳಿ, 'ಮೇಲಾಗಲೊಲ್ಲೆನು, ಕೀಳಾಗಲೊಲ್ಲದೆ ಮೇಲಾಗಿ ನರಕದೊಳು ಓಲಾಡಲಾರೆನು' ಎಂದರು. ಅಲ್ಲದೆ, ವಚನವೊಂದರಲ್ಲಿ ಹೀಗೆ ನುಡಿದರು:

*ದೇವಾ, ದೇವಾ, ಭಿನ್ನಪ ಅವಧಾರು ;*
*ವಿಪ್ರ ಮೊದಲು ಅಂತ್ಯಜ ಕಡೆಯಾಗಿ,*





ಕಲಿಯಲು ಸಮಾನರಾಗಿ ಅಭ್ಯಾಸ ಮಾಡಲು ಅನುಕೂಲವಾಯಿತು. ಈ ರೀತಿಯ ವ್ಯವಸ್ಥೆ ಇಡೀ ಭಾರತದಲ್ಲಿ ಪ್ರಥಮ ಎಂದರೆ ತಪ್ಪಾಗಲಾರದು.

ಉದ್ದಾನ ಶಿವಯೋಗಿಗಳು ಶಿವಯೋಗಸಾಧನೆಯಲ್ಲಿ ಬಹು ಮೇಲ್ಮಟ್ಟದಲ್ಲಿದ್ದರು. ಹುಟ್ಟಿನಿಂದಲೇ ಯೋಗಪುರುಷರಾಗಿದ್ದರು. ಶಿವಶಕ್ತಿ ಮತ್ತು ಪರುಷಶಕ್ತಿ ಇವರಿಗೆ ಮೈಗೂಡಿತ್ತು. ಕೆಲವೊಮ್ಮೆ ಬೆಟ್ಟದ ಮೇಲಿನ ಗುಹೆ ಮತ್ತು ರಾಮೇದೇವರ ಬೆಟ್ಟದ ದೊಡ್ಡಸಿದ್ದಪ್ಪನ ಗವಿಗಳಲ್ಲಿ ಏಕಾಂತವಾಗಿ ಗಂಟೆಗಟ್ಟಲೇ ಧ್ಯಾನಿಸುತ್ತಿದ್ದರು. ಶ್ರೀಗಳು ಸಿದ್ಧಲಿಂಗೇಶ್ವರರೊಡನೆ ಸಂಭಾಷಿಸುವುದನ್ನು ಕೇಳಿದ್ದೇವೆ ಎಂದು ಈಗಲೂ ಜನ ಹೇಳುತ್ತಾರೆ. ರಾತ್ರಿ ವೇಳೆಯಲ್ಲಿ ಅವರಿಗೆ ಸ್ವಯಂ ಬೆಳಕು ನೀಡುವ ಪಂಜುಗಳು ದಾರಿ ತೋರಿಸುತ್ತ ಬೆಳಕು ನೀಡುತ್ತಿದ್ದವಂತೆ. ಹೀಗಿದ್ದಾಗ ಆಕಸ್ಮಿಕವಾಗಿ ತಮ್ಮ ಉತ್ತರಾಧಿಕಾರಿಯಾಗಿದ್ದ ಶ್ರೀ ಮರುಳಾರಾಧ್ಯರು ತೀವ್ರ ಅನಾರೋಗ್ಯದಿಂದ ಮರಣೋನ್ಮುಖರಾದರು. ಅವರ ತರುವಾಯ ಬೆಂಗಳೂರಿನಲ್ಲಿ ವಿದ್ಯಾಭ್ಯಾಸ ಮಾಡುತ್ತಿದ್ದ ವೀರಾಪುರದ ಶಿವಣ್ಣನನ್ನು ತಮ್ಮ ಉತ್ತರಾಧಿಕಾರಿಯನ್ನಾಗಿ ನೇಮಿಸಿ 'ಶ್ರೀಶಿವಕುಮಾರಸ್ವಾಮಿಗಳು' ಎಂಬುದಾಗಿ ನಾಮಕರಣ ಮಾಡಿದರು. ಸುಮಾರು ಹನ್ನೊಂದು ವರ್ಷಗಳ ಕಾಲ ಇವರನ್ನು ಅನೇಕ ಅಗ್ನಿ ಪರೀಕ್ಷೆಗೆ ಒಳಪಡಿಸಿದರು. ಹಲವಾರು ರೀತಿಯಲ್ಲಿ ತೊಂದರೆ ಕೊಟ್ಟು ಪರೀಕ್ಷಿಸಿದರು. ಪುಟವಿಟ್ಟು ಒರಗೆ ಹಚ್ಚಿ, ಕಡಿದು, ಬಡಿದು, ತಿಕ್ಕಿ, ಉಜ್ಜಿ, ಲಿಂಗದೇವನ ಕಂಠಾಭರಣವನ್ನಾಗಿ ಮಾಡಿದರು. ಹೊರಗೆ ತೋರ್ಪಡಿಕೆಯ ಕೋಪವಿದ್ದರೂ, ಒಳಗೊಳಗೆ ಅವರ ಕರ್ತವ್ಯಪ್ರಜ್ಞೆ, ದಕ್ಷತೆ, ಗಂಭೀರತೆ, ಸರ್ವಜೀವದಯಾಪರತೆ, ಪೂಜಾನಿಷ್ಠೆಗಳಿಗೆ ಹಿರಿಹಿರಿ ಹಿಗ್ಗಿದರು. ಕೈಗೆ ಹೆಚ್ಚು ಹಣ ಕೊಡುತ್ತಿರಲಿಲ್ಲ. 'ದುಡಿದು ದಾಸೋಹ ಮಾಡು' ಎಂದುಗದರುತ್ತಿದ್ದರು. ಒಮ್ಮೆ ದಾಸೋಹಕ್ಕೆ ಬೇಳೆ ಇಲ್ಲದಾಗ ವಿದ್ಯಾರ್ಥಿಗಳಿಂದ ಸಾಲವಾಗಿ ಪಡೆದು ದಾಸೋಹ ನಡೆಸಿ, ನಂತರ ಹಣ ವಾಪಾಸು ಮಾಡಿದರು. ಭಕ್ತರ ಬಿನ್ನಹಗಳಿಗೆ ಅನೇಕಬಾರಿ ಸುಮಾರು ೧೦-೧೨ ಮೈಲಿ ಕಾಲ್ನಡಿಗೆಯಲ್ಲಿ ಹೋಗಿ ಬಂದದ್ದು ಉಂಟು. ಶ್ರೀ ಶಿವಕುಮಾರವರನ್ನು ಉದ್ದಾನಪ್ಪನವರು ಆಗಿಂದ್ದಾಗ್ಗೆ ಪರೀಕ್ಷಿಸುತ್ತಿದ್ದರು. ಕಷ್ಟದ ಕೆಲಸ ಕೊಟ್ಟು ಮೇಲ್ವಿಚಾರಣೆ ಮಾಡುತ್ತಿದ್ದರು. ಏನಾದರೂ ಹೆಚ್ಚು ಖರ್ಚುಮಾಡಿದರೆ, 'ನೀನು ಮಠ ಉಳಿಸುವುದಿಲ್ಲ, ಅದೇನು ಖರ್ಚು? ಅದೇನು ವೆಚ್ಚ? ಹೀಗಾದರೆ ಮಠದ ಗತಿಯೇನು? ಎಂದು ಎಲ್ಲರ ಮುಂದೆ ಹೇಳಿ ಅವರೇನಾದರೂ ಹೌದು ಬುದ್ದಿ ಎಂದರೆ, ಮತ್ತೆ ಅವರನ್ನು ತರಾಟೆಗೆ ತೆಗೆದುಕೊಂಡು, ಚಿಕ್ಕ ಶ್ರೀಗಳ ಬಗ್ಗೆ ಈ ರೀತಿ ಹೇಳುತ್ತಿದ್ದೀಯಾ! ಮೂರ್ಖ ಎಂದು ಬೈಯುತ್ತಿದ್ದರು. ಬಡಬಗ್ಗರನ್ನು, ಭಕ್ತಾದಿಗಳನ್ನು, ವಿದ್ಯಾರ್ಥಿಗಳನ್ನು ಕಂಡರೆ ಎಷ್ಟೊಂದು ಪ್ರೀತಿ ಎಂದು ಚಿಕ್ಕಸ್ವಾಮಿಗಳನ್ನು ಪ್ರಶಂಸಿಸುತ್ತಿದ್ದರು. ಯಾವಾಗ ಏನು ಮಾತನಾಡುತ್ತಾರೋ ಎಂಬುದು ಯಾರಿಗೂ ತಿಳಿಯುತ್ತಿರಲಿಲ್ಲ. ಆದರೆ ಎಲ್ಲವೂ ವ್ಯವಸ್ಥಿತವಾಗಿ ನಡೆಯುತ್ತಿತ್ತು. ಅದಕ್ಕೆ ಹೇಳುತ್ತಾರೆ-

*ಲಕ್ಕೂರು ಗ್ರಾಮದಲಿ ಲಕ್ಷದಳಗೊಂದಂತೆ*
*ಅಕ್ಷಯದ ಪಾತ್ರೆಯನು ಭಿಕ್ಷೆಯಲಿ ತುಂಬಿಸಿ*
*ಲಕ್ಷೋಪಲಕ್ಷ ಉದರವನು ತಣಿಸಿದ*
*ಶ್ರೀ ಉದ್ದಾನಶಿವಯೋಗಿಗಳಿಗೆ ಶರಣೆನ್ನುವೇ*

ಮಹಾಕಾರಣಿಕರೂ, ಶಿವಪೂಜಾನಿಷ್ಠಾಗರಿಷ್ಠರು, ಕರ್ತವ್ಯಶೀಲರೂ, ಲೋಕ ವ್ಯವಹಾರ ಜ್ಞಾನ, ಭಕ್ತಿ, ಜನವಾತ್ಸಲ್ಯ, ಕಾಯಕ ಸದ್ಭಾವನೆ ಇತ್ಯಾದಿ ಯೋಗ್ಯಗುಣಗಳನ್ನು ಹೊಂದಿರುವ ಶ್ರೀ ಶಿವಕುಮಾರಸ್ವಾಮಿಗಳವರಿಗೆ ಉದ್ದಾನ ಶಿವಯೋಗಿಗಳ ಆಶೀರ್ವಾದವಿರುವಾಗ ಇನ್ನಾವ ಯೋಗ್ಯತಾ ಪತ್ರಗಳು, ಬಿರುದು ಬಾವಲಿಗಳು ಬೇಕಿಲ್ಲವಷ್ಟೇ? ಉದ್ದಾನ ಶಿವಯೋಗಿಗಳ ತಪಃಶಕ್ತಿಯ ದಿವ್ಯಜ್ಯೋತಿಯಾದ ಶ್ರೀ ಶಿವಕುಮಾರ ಜ್ಯೋತಿ ಬೆಳಗತೊಡಗಿತು. ಆ ಕಲ್ಪವೃಕ್ಷದ ಬೀಜದಿಂದ ಈ ಕಲ್ಪವೃಕ್ಷ ಮೊಳೆತು ಮಹಾವೃಕ್ಷವಾಗತೊಡಗಿತು. ಶಿವನಿಚ್ಛೆಯಂತೆ ದಿನಾಂಕ ೧೧-೦೧-೧೯೪೧ನೇ ಶನಿವಾರ ರಾತ್ರಿ ೧೧.೪೫ರ ಸುಮಾರಿಗೆ ಶಿವಯೋಗಿಗಳ ಜೀವಜ್ಯೋತಿ ಪರಂಜ್ಯೋತಿಯಲ್ಲಡಗಿತು. ಇಂದಿಗೂ ಈ ದಿವ್ಯಜ್ಯೋತಿ ತೆರೆಮರೆಯಲ್ಲಿ ನಿಂತು, ಶ್ರೀ ಶಿವಕುಮಾರಸ್ವಾಮಿಗಳವರನ್ನು ಆಶೀರ್ವದಿಸುತ್ತಾ, ಶ್ರೀ ಸಿದ್ಧಗಂಗಾ ಪುಣ್ಯ ಭೂಮಿಯನ್ನು ಸ್ವರ್ಗವನ್ನಾಗಿಸಲು ಆಧ್ಯಾತ್ಮಿಕ ಬೆಳಕು ನೀಡುತ್ತಿದೆ. ಶ್ರೀ ಮಠದಲ್ಲಿ ಶ್ರೀ ಉದ್ದಾನ ಶ್ರೀಗಳವರ ಸ್ಮರಣೋತ್ಸವವನ್ನು ಪ್ರತಿವರ್ಷದ ಸಂಕ್ರಾಂತಿ ದಿನದಂದು ಆಚರಿಸಿಕೊಂಡು ಬರಲಾಗುತ್ತಿದೆ.

ಆಧಾರ: 'ಸಿದ್ಧಗಂಗಾಶ್ರೀ' ಗ್ರಂಥ ❖

# ಭಂಡಾರ ಮತ್ತು ಬಸವಣ್ಣ

–ಡಾ|| ಎಂ.ಎಂ. ಕಲಬುರ್ಗಿ*

ಪ್ರಾಚೀನ ಭಾರತೀಯರ ಪರಿಕಲ್ಪನೆಯಲ್ಲಿ ಒಂದು ಭೂಪ್ರದೇಶವು ರಾಜ್ಯವೆನಿಸಿಕೊಳ್ಳಬೇಕಾದರೆ ರಾಜ, ಮಂತ್ರಿ, ಸೈನ್ಯ, ಪ್ರಜೆ, ಕೋಟೆ, ಭಂಡಾರ, ಪ್ರದೇಶ– ಈ ಏಳು ಅಂಗಗಳು ಅವಶ್ಯವೆನಿಸಿದ್ದವು. ರಾಜ್ಯದ 'ಸಪ್ತಾಂಗ'ವೆನಿಸುವ ಇವುಗಳಲ್ಲಿ ಭಂಡಾರವು ಮಿಕ್ಕವುಗಳನ್ನು ಪೋಷಿಸುವ ಜೀವ ಶಕ್ತಿಯಾಗಿದ್ದುದರಿಂದ, ಅದು ಮಹತ್ಮಪೂರ್ಣ ಅಂಗ ವೆನಿಸಿದ್ದಿತು. ಆಗಾಗ ಯುದ್ಧದಲ್ಲಿ ಅಪಹರಿಸಿ ತಂದ ಸಂಪತ್ತು, ಅಧೀನರಾಜರಿಂದ ಪ್ರತಿವರ್ಷ ಬರುವ ಕಪ್ಪಕಾಣಿಕೆ, ಸ್ಥಳೀಯ ಮೂಲಗಳಿಂದ ನಿರಂತರ ಬರುವ ಸುಂಕ– ಇತ್ಯಾದಿಗಳಿಂದ ಬೆಳೆದ ಸಂಪತ್ತಿನ ಮೊತ್ತವೇ ಭಂಡಾರ. ಇದನ್ನು ನೋಡಿಕೊಳ್ಳುವವ ಭಂಡಾರಿ ಅಥವಾ ಸಚಿವ (Finance minister).

ಬಸವಣ್ಣನವರು ಬಿಜ್ಜಳನಲ್ಲಿ ಸಚಿವರಾಗಿದ್ದುದು ಸರ್ವ ಶ್ರುತ. ಪ್ರಾಚೀನ ಕಾವ್ಯಗಳು ಕೆಲವೊಮ್ಮೆ ಈ ಹುದ್ದೆಯನ್ನು ವೈಭವೀಕರಿಸಿ ಬರೆದಿದ್ದರೂ 'ಭಂಡಾರಿ ಬಸವಂ ದಂಡ ನಾಥ ತ್ರಿಣೇತ್ರಂ' ಎಂದು ಮುಂತಾಗಿ ಪದೇ ಪದೇ ಉಲ್ಲೇಖಿಸುವುದರಿಂದಲೂ, ಬಸವಣ್ಣನ ವಿಷಯ ಬಂದಾಗ ಲೆಲ್ಲಾ ಭಂಡಾರದ ಪ್ರಸ್ತಾಪಮಾಡುವುದರಿಂದಲೂ, ನಮ್ಮ ಕವಿಗಳ ಅಭಿಪ್ರಾಯದಲ್ಲಿ ಅವರು ಭಂಡಾರದ ಮಂತ್ರಿ ಗಳಾಗಿದ್ದರೆಂದೇ ತೋರುತ್ತದೆ. 'ಕೂಡಲಸಂಗನ ಮಹಾ ಮನೆಯಲ್ಲಿ ಧರ್ಮಸಂತಾನ ಭಂಡಾರಿ ಬಸವಣ್ಣನು'. 'ಬಿಜ್ಜಳನ ಭಂಡಾರವೆನಗೇಕಯ್ಯಾ?' ಎಂಬಂಥ ವಚನಗಳ ಮೂಲಕವೂ ತಾವು ಭಂಡಾರಿಯೆಂದು ಬಸವಣ್ಣನವರು ಸ್ಪಷ್ಟಪಡಿಸುತ್ತಾರೆ. ಆದುದರಿಂದ ಅವರು ಬಿಜ್ಜಳನಲ್ಲಿ ಭಂಡಾರ ಮಂತ್ರಿಯಾಗಿದ್ದರೆಂದೇ ಇಟ್ಟುಕೊಳ್ಳಬೇಕಾಗುತ್ತದೆ.

ಪ್ರಾಚೀನ ಕಾಲದಲ್ಲಿ 'ರಾಜ್ಯಭಂಡಾರ'ವೆಂಬುದು 'ರಾಜನ ಭಂಡಾರ'ವೆಂದೇ ಜನತೆಯ ನಂಬುಗೆಯಾಗಿದ್ದಿತು. ಆ ರಾಜಸತ್ತಾಯುಗದಲ್ಲಿ ಅದರ ವಿನಿಯೋಗದ ಹಕ್ಕು ನೇರವಾಗಿ ರಾಜನ ಸ್ವಾಮಿತ್ವಕ್ಕೆ ಒಳಪಟ್ಟಿದ್ದಿತು. ಅಂದರೆ ಕೇಂದ್ರದಲ್ಲಿ ಚಕ್ರವರ್ತಿಯ, ಮಂಡಲದಲ್ಲಿ ಮಾಂಡಲಿಕನ, ನಾಡಿನಲ್ಲಿ ನಾಳ್ಗಾವುಂಡನ–ಹೀಗೆ ಆಳುವ ವರ್ಗದ ಖಾಸಗಿ ಆಸ್ತಿಯಂತೆ ಅದು ವಿನಿಯೋಗವಾಗುತ್ತಲಿದ್ದಿತು.

ಇವರನ್ನು ಬಿಟ್ಟರೆ ಈ ಭಂಡಾರ ಮುಖ್ಯವಾಗಿ ವಿನಿಯೋಗವಾದುತ್ತಿದ್ದುದು, ಯಾವುದೇ ಮತದ ಪುರೋಹಿತ ವರ್ಗಕ್ಕೆ, ದೇವಾಲಯಗಳ ನಿರ್ಮಾಣ–ನಿರ್ವಹಣೆ, ಅಗ್ರಹಾರಗಳ ಪೋಷಣೆ, ಧಾರ್ಮಿಕ ಸಂದರ್ಭದ ದಾನದಕ್ಷಿಣೆ–ಇತ್ಯಾದಿ ಹೆಸರಿನಿಂದ ಈ ಭಂಡಾರ ವ್ಯಯವಾಗುತ್ತಲಿದ್ದಿತು. ಮಧ್ಯಕಾಲೀನ ಕರ್ನಾಟಕದ ದೇವಾಲಯ, ಅಗ್ರಹಾರಗಳಿಗೆ ಸಂಬಂಧಿಸಿದ ದಾಖಲೆ ಗಳನ್ನು ನೋಡಿದರೆ ಈ ಮಾತು ಮನವರಿಕೆಯಾಗುತ್ತದೆ.

ಈ ಬಗೆಯಲ್ಲಿ ಭಂಡಾರ ವಿನಿಮಯವಾಗುವ ಅಂದರೆ ದುರ್ವಿನಿಯೋಗವಾಗುವ ಉಸ್ತುವಾರಿ ನೋಡಿ ಕೊಳ್ಳುವವ ಅಂದಿನ ಭಂಡಾರಿ. ಭಂಡಾರದ ಈ ದುರ್ವಿನಿ ಯೋಗವೇ ಸದ್ವಿನಿಯೋಗವೆಂಬ ಭಾವನೆ ಅಂದಿನ ರಾಜಕೀಯ–ಸಾಮಾಜಿಕ ವ್ಯಕ್ತಿಗಳದಾಗಿದ್ದಿತು. ಇಂಥ ಕೆಟ್ಟ ಕಾಲದಲ್ಲಿ ಬಸವಣ್ಣ ಭಂಡಾರದ ಮಂತ್ರಿಯಾಗಿ ಬಂದ. ಭ್ರಷ್ಟವ್ಯವಸ್ಥೆಯಲ್ಲಿ ಒಬ್ಬ ಶುದ್ಧ ವ್ಯಕ್ತಿ ಪ್ರವೇಶ ಮಾಡಿದ. ತತ್ವವಾದಿಯಾದ ಅವನು ಈಗ ಹಾಕಿಕೊಂಡ ಮೊದಲ ಪ್ರಶ್ನೆಯೆಂದರೆ, ಈ ಭಂಡಾರ ಯಾರದು? ಇದರ ಮೇಲೆ ಇರುವುದು ಯಾರ ಹಕ್ಕು?

ಈ ಪ್ರಶ್ನೆಗೆ ವೀರಶೈವ ಪುರಾಣಗಳಲ್ಲಿ, ಅದರಲ್ಲಿಯೂ 'ಬಸವರಾಜದೇವರ ರಗಳೆ'ಯಲ್ಲಿ ಉತ್ತರ ಸಿಗುವಂತೆ ತೋರುತ್ತದೆ. ಬಸವಣ್ಣ ಕುಲಚುರಿಗಳ ಭಂಡಾರದ ಕರಣಿಕ ನಾಗುತ್ತಾನೆ. ಚಾಲುಕ್ಯರ ಕಾಲದಿಂದಲೂ ಬೆಳೆಯುತ್ತ ಬಂದ ಶ್ರೀಮಂತ ಭಂಡಾರವದು. ಮೊದಲ ದಿನ ಭಂಡಾರದ ಬಾಗಿಲನ್ನು ತೆರೆಯುತ್ತಲೇ,

*ಅಯ್ಯಲಾ! ಇಂತಪ್ಪನರ್ಘ್ಯಮಂ ಭಕ್ತರ್ಗೆ*
*ಕಯ್ಯಾರೆ ಕುಡಲಿಲ್ಲ ಪರಶಿವನ ಭಕ್ತರ್ಗೆ*

* ವಿಶ್ರಾಂತ ಕುಲಪತಿಗಳು, ಸೌಜನ್ಯ, ೯ನೇ ಕ್ರಾಸ್, ಕಲ್ಯಾಣನಗರ, ಧಾರವಾಡ.





ದಾಸೋಹವಾಗಿತ್ತು. ಇದರ ಮುಖ್ಯ ಉದ್ದೇಶ ಬಲಿಷ್ಠ ಹಾಗೂ ಸಾಮರಸ್ಯ ಸಮಾಜವನ್ನು ಕಟ್ಟುವುದಾಗಿತ್ತು. ಅನ್ನದಾಸೋಹ, ಜ್ಞಾನದಾಸೋಹ ಮತ್ತು ಕಾಯಕ ದಾಸೋಹಗಳನ್ನು ಪ್ರತಿಪಾದಿಸಿ, ಜಾರಿಗೊಳಿಸಿದರು. ಈ ಮೂರು ದಾಸೋಹಗಳು ವ್ಯಕ್ತಿಯಲ್ಲಿ ಮಾನವೀಯತೆ ಯನ್ನು ಉಂಟುಮಾಡುತ್ತವೆ ಮತ್ತು ಸಮಾಜದಲ್ಲಿ ಉನ್ನತಿ ಹಾಗೂ ಶಾಂತಿಯನ್ನು ನಿರ್ಮಿಸುತ್ತವೆ.

ಬಸವೇಶ್ವರರ ದೃಷ್ಟಿಯಲ್ಲಿ ಮತ್ತೊಂದು ಪೂರಕ ವ್ಯವಸ್ಥೆಯೆಂದರೆ ಪ್ರಜಾಪ್ರಭುತ್ವ ಪದ್ಧತಿ ಸರ್ಕಾರ, ಅಂದಿನ ಕಾಲದಲ್ಲಿ ಈ ಪದ್ಧತಿ ಹೆಚ್ಚು ಜನಪ್ರಿಯವಾಗಿರಲಿಲ್ಲದಿದ್ದರೂ, ಪ್ರಜೆಗಳೇ ನಾಡಿಗೆ ಒಡೆಯರಾಗಬೇಕೆಂಬುದು ಇವರ ನಿಲುವಾಗಿತ್ತು. ಪ್ರಜೆಗಳ ಬಂಧುವಾಗಿದ್ದ ಇವರು ಅವರ ಕಣ್ಮಣಿಗಳಾಗಿದ್ದರು. ಲೋಕೋದ್ಧಾರ ಪ್ರಜಾಪ್ರಭುತ್ವದಲ್ಲಿ ಸಾಧ್ಯ ಎಂಬ ನಂಬಿಕೆಯನ್ನು ಹೊಂದಿದ್ದರು. ಪ್ರಜಾಪ್ರಭುತ್ವ ದಲ್ಲಿ ಮಾನವೀಯತೆಯನ್ನು ಉಂಟುಮಾಡಲು ಅವಕಾಶ ವಿದೆ. ರಾಜಕೀಯ ಸಮಾನತೆ, ಜನಪ್ರಿಯ ಪರಮಾಧಿಕಾರ, ಜನಾಧಾರಿತ ರಾಜಕೀಯ ಪ್ರಕ್ರಿಯೆ, ಸಾಮಾಜಿಕ ಹಾಗೂ ಆರ್ಥಿಕ ನ್ಯಾಯ, ಪ್ರಜೆಗಳ ಹಕ್ಕುಗಳು ಮತ್ತು ಅವುಗಳ ರಕ್ಷಣೆ, ವಿವಿಧ ಅಲ್ಪಸಂಖ್ಯಾತ ವರ್ಗಗಳ ರಕ್ಷಣೆ, ಮಹಿಳೆ ಯರಿಗೆ ಸಮಾನ ಅವಕಾಶ ಮತ್ತು ಮಕ್ಕಳ ಬೆಳವಣಿಗೆಗೆ ಸೌಲಭ್ಯ ಮುಂತಾದುವು ಪ್ರಜಾಪ್ರಭುತ್ವದಲ್ಲಿ ಮೂಲಾಂಶ ಗಳಾಗಿರುವುದರಿಂದ ಎಲ್ಲರಲ್ಲೂ ಮಾನವೀಯತೆಯನ್ನು ಬೆಳೆಸಲು ಅವಕಾಶವಿದೆ. ಈ ಪದ್ಧತಿ ಸರ್ಕಾರದಲ್ಲಿ ದಾಸ್ಯದ ಜೀವನಕ್ಕೆ, ಶೋಷಣೆಗೆ ಮತ್ತು ಗುಲಾಮಗಿರಿಗೆ ಅವಕಾಶವಿಲ್ಲ.

ಪ್ರಜಾಪ್ರಭುತ್ವ ಸರ್ಕಾರ ಒಂದು ಜವಾಬ್ದಾರಿ ಹಾಗೂ ಸಂವಿಧಾನಾತ್ಮಕ ಸರ್ಕಾರ. ಪ್ರಜೆಗಳಿಂದ ಆಯ್ಕೆಯಾಗುವ ಇದು ನಿರಂಕುಶ ರೀತಿಯಲ್ಲಿ ಆಡಳಿತ ನಡೆಸುವಂತಿಲ್ಲ, ಪ್ರಜೆಗಳ ಸರ್ವೋದಯವನ್ನು ಕಡೆಗಣಿಸುವಂತಿಲ್ಲ ಮತ್ತು ಪ್ರಜೆಗಳ ಹಕ್ಕುಗಳನ್ನು ಹತ್ತಿಕ್ಕುವಂತಿಲ್ಲ. ಮಾನವೀಯತೆಯ ಆಧಾರದ ಮೇಲೆ ಆಡಳಿತ ನಡೆಸಿ, ಸಮಾಜದಲ್ಲಿ ಶಾಂತಿ–ನೆಮ್ಮದಿ ಉಂಟುಮಾಡಬೇಕು. ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ಕ್ಷೇತ್ರಗಳಲ್ಲಿ ಪುರುಷರಷ್ಟೇ ಮಹಿಳೆಯರು ಸಕ್ರಿಯವಾಗಿ ಭಾಗವಹಿಸಿ, ಸಮಾಜದ ಕಲ್ಯಾಣಕ್ಕೆ ಕೊಡುಗೆ ನೀಡಬಲ್ಲರು ಎಂಬ ವಾದವನ್ನು ಪ್ರತಿಪಾದಿಸಿದರು. ಇಂತಹ ವಾಸ್ತವ ಮತ್ತು ದೂರದೃಷ್ಟಿಯನ್ನು ಹೊಂದಿದ್ದ ಬಸವಣ್ಣ ನವರು ಲಿಂಗಭೇದಕ್ಕೆ ತಿಲಾಂಜಲಿ ಹಾಡಿದ್ದು ಅವರ ಧೈರ್ಯಕ್ಕೆ ಸಾಕ್ಷಿಯಾಯಿತು. ಪುರುಷರು–ಮಹಿಳೆಯರು ಸಮಾನರು ಮತ್ತು ಸಮಾನ ಸಾಮರ್ಥ್ಯವನ್ನು ಹೊಂದಿರು ವವರು ಎಂಬ ಅಭಿಪ್ರಾಯ ಮಾನವೀಯತೆಯ ಪ್ರತೀಕ ವಾಗಿದೆ. ಹೀಗೆ ಇವರು ಪ್ರಜಾ ಸಮುದಾಯದ ಬಗ್ಗೆ, ಜನತಂತ್ರದ ಬಗ್ಗೆ ಹಾಗೂ ಸಾಮಾಜಿಕ ನ್ಯಾಯದ ಬಗ್ಗೆ ವಿಶ್ವಾಸ ಮತ್ತು ಅಭಿಮಾನವನ್ನು ಪ್ರದರ್ಶಿಸಿದರು.

**ಸಮಾರೋಪ:** ಕತ್ತಲ ಯುಗದಲ್ಲಿ ಜನಿಸಿ, ಜನಪ್ರಿಯ ರೂವಾರಿಯಾಗಿ ಸಮಾಜದ ಬೆಳಕನ್ನು ಚೆಲ್ಲಿದ ಬಸವಣ್ಣ ನವರು ದೈವಸ್ವರೂಪಿಯಾಗಿದ್ದರು. ಬಾಲ್ಯದಿಂದಲೇ ಮಾನವೀಯತೆಯನ್ನು ಮೈಗೂಡಿಸಿಕೊಂಡಿದ್ದ ಇವರು ಇದರ ಪ್ರಾಮುಖ್ಯತೆಯನ್ನು ಮತ್ತು ಸಮಂಜಸತೆಯನ್ನು ಒತ್ತಿ ಹೇಳಿದರು. ತಮ್ಮ ನುಡಿಯಲ್ಲಿ, ನಡೆಯಲ್ಲಿ ಮತ್ತು ಕಾರ್ಯಶೈಲಿಯಲ್ಲಿ ಈ ಉದಾತ್ತ ಗುಣವನ್ನು ಪ್ರದರ್ಶಿಸಿದರು. ಅಂಧಕಾರ ಮತ್ತು ಅಜ್ಞಾನ ಸಮಾಜದ ಸುಧಾರಣೆಗೆ ಹಾಗೂ ಬಲವರ್ಧನೆಗೆ ಮಾನವತಾವಾದ ಅತ್ಯಗತ್ಯವೆಂಬ ದೃಢ ನಂಬಿಕೆಯನ್ನು ಹೊಂದಿದ್ದರು. ಆಧುನಿಕ ಸಮಾಜದಲ್ಲಿ ತಾಂಡವವಾಡುತ್ತಿರುವ ಕ್ರೌರ್ಯತೆ, ಮೌಢ್ಯತೆ, ಜನಾಂಗೀಯ ಮತ್ತು ಜಾತಿ ಘರ್ಷಣೆಗಳು, ಸ್ವಜನ ಪಕ್ಷಪಾತ, ಮತಾಂಧತೆ, ಜಾತೀಯತೆ, ಉಪಜಾತೀಯತೆ, ಭ್ರಷ್ಟಾಚಾರ, ಸ್ವಾರ್ಥತೆ ಮುಂತಾದ ದುರ್ಗುಣಗಳನ್ನು ಹಾಗೂ ಸ್ವೇಚ್ಛಾಚಾರವನ್ನು ನಿರ್ಮೂಲನ ಮಾಡಲು ಬಸವತತ್ತ್ವ ಮುಖ್ಯವಾಗಿದೆ ಯೆಂದು ಮಹಾತ್ಮಾ ಗಾಂಧೀಜಿಯವರು ಹೇಳಿರುವುದು ಸಮಂಜಸ ವಾಗಿದೆ. ಈ ದಿಕ್ಕಿನಲ್ಲಿ ಬಸವತತ್ವವನ್ನು ವಿಶ್ವಾದ್ಯಾಂತ ಪ್ರಚಾರ ಮಾಡಿ ಜನಪ್ರಿಯಗೊಳಿಸುವುದು ಸೂಕ್ತವಾಗಿದೆ. ಬಸವಣ್ಣ ನವರ ವಚನಗಳನ್ನು ಆಂಗ್ಲಭಾಷೆಗೆ ತರ್ಜುಮೆ ಮಾಡಿಸಲು ಕ್ರಮ ಕೈಗೊಂಡಿರುವುದು ಸ್ವಾಗತಾರ್ಹವಾಗಿದೆ. ಇದೇ ರೀತಿ ಇವರ ಚಿಂತನೆಗಳ ಕುರಿತು ಆಂಗ್ಲ ಭಾಷೆಯಲ್ಲಿ ಪುಸ್ತಕಗಳು ಪ್ರಕಟವಾಗಬೇಕಾಗಿದೆ. ಇಂದಿನ ಕಲುಷಿತ ಮತ್ತು ದುಷ್ಟ ಸಮಾಜದ ಸಮಗ್ರ ಸುಧಾರಣೆಗೆ ಬಸವತತ್ತ್ವದ ಅಧ್ಯಯನ, ಅಧ್ಯಾಪನ ಮತ್ತು ಸಂಶೋಧನೆ ಅತ್ಯಗತ್ಯವಾಗಿದೆ.

❖

# ಸಿದ್ಧರಾಮನು ನಿರ್ಮಿಸಿದ ಭೂ ಕೈಲಾಸ

–ಡಾ॥ ಸಾ.ಶಿ. ಮರುಳಯ್ಯ *



ಕಲ್ಯಾಣದ ಸಮಾಜೋ–ಧಾರ್ಮಿಕ ಕ್ರಾಂತಿ ವಿಶ್ವೇತಿಹಾಸದಲ್ಲಿ ಸುವರ್ಣಾಕ್ಷರಗಳಲ್ಲಿ ಬರೆದಿಡುವಂಥದು. ಪ್ರಪಂಚದ ಹಳೆಯ ಕಂದಾಚಾರಗಳು ಅಂಗೈಯಲ್ಲಿ ಆಕಾಶ ತೋರಿಸಿದರು; ಮೌಢ್ಯಕ್ಕೆ ಮಾನವತೆಯನ್ನು ಮಾರಿದರು; ಧರ್ಮದ ದ್ರೋಹದುರ್ಗದಲ್ಲಿ ಜ್ಞಾನವನ್ನು ಸೆರೆ ಹಾಕಿದರು; ದೇವರು ಎಂಬ ನಿರ್ಜೀವ ವಸ್ತುವಿಗೆ ಬಣ್ಣ ಬಂಗಾರ ತೊಡಿಸಿ, ಅಮಾಯಕರ ಕಣ್ಮುಂದೆ ಇಂದ್ರಜಾಲವನ್ನು ನೇಯ್ದರು! 'ಅಶನಕ್ಕೆ ಅಳುವ, ವ್ಯಸನಕ್ಕೆ ಮರುಗುವ, ಉಂಡುಂಡು ಅಡ್ಡಾಡಿ, ಬಾಯಿಗೆ ಬಂದಂತೆ ಜರೆವ' ಉಂಡಾಡಿ ತುಂಡುದನಗಳ ದಂಡು ಮೆರೆದಾಡಿದ್ದುಂಟು. ಅಂತಹ ದಂಡಪಿಂಡಗಳನ್ನು ತಮ್ಮ 'ಕಾಯಕತತ್ತ್ವ'ದ ಮೂಲಕ ದಿಂಡುಗೆಡವಿದ ಕೀರ್ತಿ ಅಂದಿನ ಶಿವಶರಣರಿಗೆ ಸಲ್ಲುತ್ತದೆ. ಅವರು ಸಮಾಜಕ್ಕೆ ಮೊದಲು ಕಲಿಸಿದ ಪಾಠ ಪ್ರತಿವ್ಯಕ್ತಿಯೂ ದುಡಿಯಬೇಕು, ದುಡಿದುಣ್ಣಬೇಕು, ಅನ್ಯರ ದುಡಿಮೆಯನ್ನು ತಿನ್ನುವ ಹಕ್ಕು ಯಾರಿಗೂ ಇಲ್ಲ 'ಕಾರೆಯ ಸೊಪ್ಪಾದರೂ ಕಾಯಕದಿಂದಲೇ ಬಂದುದಾಗಿರಬೇಕು' ಎಂಬುದು! ಅದು ಅನ್ಯರಂತೆ ಆಡಿ ಸೋತ ಒಣ ಬೋಧೆಯಲ್ಲ, ಶರಣರು ಮಾಡಿ ಗೆದ್ದ ಆದರ್ಶದ ಸಾಧನೆ. ಅವರ ದೃಷ್ಟಿಯಲ್ಲಿ ಪೂಜೆ ಕಾಯಕ ಶ್ರೇಷ್ಠವಲ್ಲ, ಮೊಚ್ಚೆ ಕಾಯಕ (ಚಪ್ಪಲಿ ಹೊಲಿಯುವುದು) ಕನಿಷ್ಠವಲ್ಲ. ಕಾಯಕ ಯಾವುದೇ ಇರಲಿ, ಅದು ಪೂಜಾರ್ಹ, ಅಷ್ಟೇ ಗೌರವಾರ್ಹವಾದುದು ಕೂಡ (Dignity of labour)ಅವರು ಘೋಷಿಸಿದ 'ಕಾಯಕವೇ ಕೈಲಾಸ' ಎಂಬ ಧ್ಯೇಯವಾಕ್ಯದಲ್ಲಿ ಬರುವ 'ಕೈಲಾಸ' ಶಬ್ಧದ ಅರ್ಥ 'ಪವಿತ್ರ' 'ಪಾವನತಮ' ಎಂದು ಅದು ಹೊರತು ಕವಿಗಳೋ, ಪುರೋಹಿತಶಾಹಿಗಳೋ ಕಟ್ಟಿದ ಕಲ್ಪನೆಯ ಕೈಲಾಸವಲ್ಲ. 'ಹೋಗಿ ಬಂದವರಿಲ್ಲ, ವರದಿ ತಂದವರಿಲ್ಲ' ಎಂಬ ನಾಣ್ನುಡಿಯಂತೆ ನೆಲೆಗಾಗಿ ಅವರು ಭ್ರಮಿಸಿದವರೂ ಅಲ್ಲ, ಬದುಕಿದವರೂ ಅಲ್ಲ. ಸಿದ್ಧರಾಮಯ್ಯ ದೇವರು ಹೇಳುವಂತೆ

*ಕೈಲಾಸವೆಂಬುದೊಂದು ಭೂಮಿಯೊಳಗಿರುವ ಹಾಳುಬೆಟ್ಟ*
*ಅಲ್ಲಿರುವ ಮುನಿಗಳೆಲ್ಲರೂ ಜೀವಗಳ್ಳರು*
*ಅಲ್ಲಿರ್ಪ ಚಂದ್ರಶೇಖರ ಬಹು ಹೆಡ್ಡ!*

ಇಂತಹ ದಿವ್ಯನಿಲ್ಯಕ್ಷ ಅವರದು! ಅವರು ಕಂಡ ಕೈಲಾಸ ವಾಸ್ತವ ಪ್ರಪಂಚ, ದರ್ಶಿಸಿದ 'ಶಿವ' 'ಕಾಯಕ'! ಆ ಕಾರಣ ಅವರು ತಮ್ಮ ತಮ್ಮ ಸತ್ಯಶುದ್ಧ ಕಾಯಕದಲ್ಲೇ ಕೈಲಾಸವನ್ನು ಕಂಡರು. 'ಶಿವ'ನನ್ನು (ಅಂದರೆ ಪಾರ್ವತಿ ಗಂಡ ಅಲ್ಲ, ಶಿವ ಅಂದರೆ ಮಂಗಳ) ಮನಸಾ ಕೊಂಡಾಡಿದರು. ಸ್ವರ್ಗದ ಮೋಹವನ್ನಾಗಲಿ, ನರಕದ ಭೀತಿಯನ್ನಾಗಲಿ ಕಂಡರಿಯದ, ಶುದ್ಧ ವಾಸ್ತವತೆಗೆ ಬದುಕಿದ, ಇಹದಲ್ಲೇ ಪರವನ್ನು ಸಾಕ್ಷಾತ್ಕರಿಸಿಕೊಂಡ ಆ ಮಹಾತ್ಮರನ್ನು ನಾನು 'ಕಾಯಕ ಯೋಗಿಗಳು' ಎಂದು ಕರೆಯುತ್ತೇನೆ.

ಅವರಲ್ಲಿ ವಚನ ಭಂಡಾರಿ ಶಾಂತರಸನದು ಶರಣರ ಬಾಯಿಂದ ಹೊರಬಂದ ವಚನಗಳನ್ನು ಸಂಗ್ರಹಿಸುವ ಕಾಯಕ, ವೈದ್ಯ ಸಂಗಣ್ಣನದು, ಜಾನಪದ ವೈದ್ಯಕೀಯ, ಸತ್ತಿಗೆ ಕಾಯಕದ ಮಾರಯ್ಯನದು, ಛತ್ರಿ ಹಿಡಿಯುವ, ಪಂಜು ಹಿಡಿಯುವ ಕಾಯಕ ಸುಂಕದ ಬಂಕಣ್ಣನದು, ಸುಂಕವಸೂಲಿ, ಸೂಜಿ ಕಾಯಕದ ರಾಮಿ ತಂದೆಯದು, ಸಿಂಪಿಗ ಅಂದರೆ ಬಟ್ಟೆ ಹೊಲಿಯುವ ದರ್ಜಿ ಕೆಲಸ. ಅದೇ ರೀತಿ ಸೊಡ್ಡಳ ಬಾಚರಸ ಲೆಕ್ಕ ಬರೆಯುವ ಕರಣಿಕ, ಹಡಪದ ಅಪ್ಪಣ್ಣ ಮತ್ತು ಹಡಪದ ರೇಚಣ್ಣ ಕ್ಷೌರಿಕರು, ಹಾವಿನಹಾಳ ಕಲ್ಲಯ್ಯ ಚಿನ್ನ ಬೆಳ್ಳಿ ಕೆಲಸ ಮಾಡುವ ಅಕ್ಕಸಾಲಿ, ಹೆಂಡದ ಮಾರಯ್ಯ ಹೆಂಡ ಮಾರುತ್ತಿದ್ದವ, ಹೊಡೆಹುಲ್ಲ ಬಂಕಣ್ಣ ಹುಲ್ಲು ಮಾರುವವ, ಅಕ್ಕಮ್ಮ ಕೃಷಿಕೆ–ಮಣ್ಣಿನ ಮಗಳು, ಆಮುಗೆ ರಾಯಮ್ಮ ನೇಯ್ಗೆಯವಳು, ಆಯ್ದಕ್ಕಿ ಲಕ್ಕಮ್ಮ (ಮಾಮನೆಯ ಅಂಗಳದಲ್ಲಿ ಚೆಲ್ಲಾಡಿದ್ದ

* 'ರಾಗಿಣಿ', ಸರ್ವಿಸ್ ರಸ್ತೆ, ೨ನೇ ಬ್ಲಾಕ್, ವಿಜಯನಗರ, ಬೆಂಗಳೂರು–೫೬೦ ೦೪೦.





ಕ್ಕಿ ಆಯುವವಳು, ಕದಿರೆ ಕಾಳವ್ವೆ ಮತ್ತು ಕದಿರೆ ರೆಮ್ಮವ್ವೆಯರು ರಾಟಿಯಿಂದ ನೂಲು ತೆಗೆಯುವವರು, ಕನ್ನಡಿ ಕಾಯಕದ ರೇವಮ್ಮ ಕ್ಷೌರದವಳು, ಕಾಲಕಣ್ಮಿಯ ಕಾಮಮ್ಮ ಹಗ್ಗ ಹೊಸೆಯುವವಳು, ಕೊಟ್ಟಣದ ಸೋಮವ್ವೆ ಭಕ್ತರ ಮನೆಯ ಕೊಟ್ಟಣದಕ್ಕಿ ಕುಟ್ಟಿ ಕೊಡುತ್ತಿದ್ದವಳು, ಗೊಗ್ಗವ್ವೆ ಧೂಪ ಅರ್ಪಿಸುವವಳು, ದುಗ್ಗಳೆ ನೇಯ್ಗೆಯವಳು, ಬಾಚಿ ಕಾಯಕದ ಬಸವಯ್ಯನ ಪುಣ್ಯಸ್ತ್ರೀ ಕಾಳವ್ವೆ ಮರದ ಕೆಲಸದ ಬಡಗಿ ಬದುಕಿನವಳು, ಮೋಳಿಗೆ ಮಹಾದೇವಿ ಕಟ್ಟಿಗೆ (ಸೌದೆ) ಒದಗಿಸುವ ಕಾಯಕದವಳು, ಕಾಯಕದ ಮಂಚಣ್ಣಗಳ ಪುಣ್ಯಸ್ತ್ರೀ ರಾಯಮ್ಮ ಗಂಡನಿಗೆ ಕಾಗದ ಪತ್ರಗಳ ಬರವಣಿಗೆ ಮಾಡಿಕೊಡುತ್ತಿದ್ದವಳು, ರೇವಣಸಿದ್ಧಯ್ಯನ ಪುಣ್ಯಸ್ತ್ರೀ ರೇಕಮ್ಮ ಗಣಾಚಾರ ನಿಷ್ಠೆ, ಸೂಳೆ ಸಂಕವ್ವೆ ಮತ್ತು ಹಾದರದ ಕಾಯಕದ ಪುಣ್ಯಸ್ತ್ರೀ ಗಂಗಮ್ಮ ಹಿಂದೆ ವೇಶ್ಯೆಯರಾಗಿದ್ದವರು, ಅಂಬಿಗರ ಚೌಡಯ್ಯ ದೋಣಿ ನಡೆಸುವ ಕಾಯಕದವನು, ಅಂಗಸೋಂಕಿದ ಲಿಂಗ ತಂದೆ ಶಿವಲಿಂಗ ತಯಾರಿಕೆಯ ಶಿಲ್ಪಿ, ಉತ್ತರ ಗುಡಿ ಸೋಮಯ್ಯ ಶರಣರ ಷಟ್‌ಸ್ಥಲ ಧ್ವಜವನ್ನು ಹಾರಿಸುವ ಕಾಯಕದವನು, ಮುಕ್ತಿನಾಥಯ್ಯನವದು ಎಚ್ಚರಿಕೆ ಕಾಯಕ, ಅಗ್ಘವಣಿ ಹಂಪಯ್ಯ ಮತ್ತು ಅಗ್ಘವಣೆಯ ಹೊನ್ನಯ್ಯರು ಶಿವಭಕ್ತರ ಪೂಜೆಗ ಬೇಕಾಗುವ ಗಂಗೆಯನ್ನು ಒದಗಿಸುವ ಕಾಯಕದವರು, ಎಲೆಗಾರ ಕಾಮಣ್ಣ ಊಟದೆಲೆಗಳನ್ನು ಒದಗಿಸುವ ಕಾಯಕದಾತ, ಉಗ್ಘಡಿಸುವ ಗಬ್ಬಿದೇವಯ್ಯ ಶಿವನಿಗೆ, ಶಿವ ಶರಣರಿಗೆ ಜೈಕಾರ ಹಾಕುವವ, ಆಮುಗಿದೇವ ನೇಯ್ಗೆಯವನು, ಆದಯ್ಯ ವ್ಯಾಪಾರಿ, ಆಯ್ದಕ್ಕಿ ಮಾರಯ್ಯ ಮಾಮನೆಯಂಗಳದ ಅಕ್ಕಿ ಆಯುವವನು, ಒಕ್ಕಲು ಮುದ್ದಯ್ಯ ಕೃಷಿ ಕಾಯಕದ ರೈತ, ಕನ್ನದ ಮಾರಿತಂದೆ ಹಿಂದೆ ಕನ್ನ ಕೊರೆಯುತ್ತಿದ್ದ ಕಳ್ಳ, ಪೆದ್ದಣ್ಣ ಚೋರ, ಕನ್ನಡಿ ಕಾಯಕದ ಅಮ್ಮಿದೇವಯ್ಯ ಕ್ಷೌರಿಕ, ದನಗಾಹಿ ರಾಮಣ್ಣ ಮತ್ತು ಭೀಮಣ್ಣರು ಊರದನಗಳನ್ನು ಕಾಯವ ಕಾಯಕದ ಗೊಲ್ಲರು, ಕಲಕೇತಯ್ಯ ಜನಪದ ಕಲಾವಿದ, ಕಿನ್ನರಿ ಬೊಮ್ಮಯ್ಯ ತಂತಿ ವಾದ್ಯ ನುಡಿಸುವ ಕಲಾವಿದ, ಡಕ್ಕೆಯ ಬೊಮ್ಮಣ್ಣ ಡಕ್ಕೆ ಅಥವಾ ನಗಾರಿ ಬಾರಿಸುತ್ತಿದ್ದವ, ನುಲಿಯ ಚಂದಯ್ಯ ಹಗ್ಗ ಹೊಸೆಯುವವ, ನಗೆಯ ಮಾರಿತಂದೆ ವಿನೋದಪಟು ಅರ್ಥಾತ್ ಹಾಸ್ಯಗಾರ, ಕಾಮಾಟದ ಭೀಮಣ್ಣ ಮನೆ ಕಟ್ಟುವವ, ಕಾಮಿದೇವಯ್ಯ ಊರ ತಲವಾರ, ಕೀಲಾರದ ಭೀಮಣ್ಣ ದನದ ಕೊಟ್ಟಿಗೆಯ ಉಸ್ತುವಾರಿ, ಜೇಡರ ದಾಸಿಮಯ್ಯ ನೇಕಾರ, ಕೂಗಿನ ಮಾರಯ್ಯ ಊರಿನಲ್ಲಿ ಸುದ್ಧಿ ಸಾರುವವನು, ಕೋಲಶಾಂತಯ್ಯ ಅಳತೆ ಕಡ್ಡಿ ತಯಾರಕ, ಗಾಣದ ಕಣ್ಣಪ್ಪ ಎಣ್ಣೆ ತೆಗೆಯುವ ಗಾಣಿಗ, ಬಹುರೂಪಿ ಚೌಡಯ್ಯ ಅಣಕವಾಡುವ ಕಲಾವಿದ, ಬಲ್ಲೇಶ ಮಲ್ಲಯ್ಯ ಸರಕು ಸಾಗಣೆಕಾರ, ಬಾಚಿ ಕಾಯಕದ ಬಸವಣ್ಣ ಬಡಗಿ, ಬಾಹೂರ ಬೊಮ್ಮಣ್ಣ ತೋಟಗಾರ್ಕೆ ಕಾಯಕದವ, ಬೊಕ್ಕಸದ ಬೊಮ್ಮಣ್ಣ ಕೋಶಾಧಿಕಾರಿ, ಮಾಡಿವಾಳ ಮಾಚಿದೇವ ಬಟ್ಟೆ ಶುಚಿಮಾಡುವವ, ಮೊಗವಾಡದ ಕೇಶೀರಾಜ ಮುಖವಾಡ ಹಾಕುತ್ತಿದ್ದ ಇಲ್ಲವೆ ತಯಾರಿಸುತ್ತಿದ್ದವ, ಸುರಗಿ ಚೌಡಯ್ಯ ಮಹಾಯೋಧ, ಡೋಹರ ಕಕ್ಕಯ್ಯ ಕಪಿಲೆ ಬಾನಿಗೆ ಬೇಕಾಗುವ ಎಮ್ಮೆ ಚರ್ಮದ ಸೊಂಡಿಲು ತಯಾರಿಸುತ್ತಿದ್ದವ, ಪಡಿಹಾರಿ ಉತ್ತಣ್ಣ ದ್ವಾರಪಾಲಕ, ಮಲಹರ ಕಾಯಕದ ಚಿಕ್ಕದೇವಯ್ಯ ಲೋಹದ ಪಾತ್ರೆ ತಯಾರಕ, ಮಾದಾರ ಚೆನ್ನಯ್ಯ ಮತ್ತು ಮಾದಾರ ಧೂಳಯ್ಯ ಇವರು ಚಪ್ಪಲಿ ತಯಾರಕರು, ಮೇದರ ಕೇತಯ್ಯ ಬಿದಿರು ಮೊರ, ಬುಟ್ಟಿ, ತೊಟ್ಟಿಲು ತಯಾರಕ, ಮೋಳಿಗೆ ಮಾರಯ್ಯ ಕಟ್ಟಿಗೆ ಕಾಯಕದವ, ಕುರುಬರ ಭೀಮಣ್ಣ ಕಂಬಳಿನೇಯುವ ಕಾಯಕದವ, ಒಡ್ಡರ ತಿಮ್ಮಯ್ಯ ಕಲ್ಲು ಹೊಡೆಯುವವ, ಕಮ್ಮಾರ ಕಾಶಣ್ಣ ಕುಲುಮೆ ಕೆಲಸದವ, ಕುಂಬಾರ ಗುಂಡಯ್ಯ ಮಡಕೆ ಕುಡಿಗೆ ಮಾಡುವವ, ಬಳಿಗಾರ ಬಸವಂತಯ್ಯ ಬಳೆ ಮಾರುವವ.

ಇವರದಲ್ಲದೆ ವಚನಗಾರ ಕಾಡಸಿದ್ಧೇಶ್ವರ ಸುಮಾರು ಅರವತ್ತೊಂದು ಕಾಯಕ ಯೋಗಿಗಳ ಪಟ್ಟಿಕೊಡುತ್ತಾನೆ.

ಮೇಲೆ ಕಾಣಿಸಿದ ಎಲ್ಲರೂ ತಮ್ಮ ತಮ್ಮ ಕಾಯಕವನ್ನು ನಿಷ್ಠೆಯಿಂದ ನಿರ್ವಹಿಸಿದವರು. ತಮ್ಮ ತಮ್ಮ ಪಾರಲೌಕಿಕ ಕ್ರಿಯೆಗಳನ್ನು ಪಾರಮಾರ್ಥಿಕ ಅನುಭಾವಕ್ಕೆ ಅನ್ವಯಿಸಿ ಹೇಳುವುದನ್ನು ಕಾಣುತ್ತೇವೆ. ಅದು ಕಾರಣ ಕಾಯಕ ಕೇವಲ ವೃತ್ತಿ ಅಥವಾ ಜೀವನೋಪಾಯಕ್ಕೆ ಸಾಧನವಾದ ಒಂದು ಕಸುಬು ಎಂದಷ್ಟೇ ಅರ್ಥವಲ್ಲ, ಅವರ ದೃಷ್ಟಿಯಲ್ಲಿ ಅದೊಂದು ಆತ್ಮನ ಅನುಸಂಧಾನ ಸಾಧನ ತಾನಾಗಿತ್ತು. ಆದರೆ ಶರಣರು ಲೋಕವನ್ನು ಮರೆತವರಲ್ಲ. ಈ ಭೂಮಿ ಅವರ ಆಧ್ಯಾತ್ಮ ಸಾಧನೆಯ ರಂಗವಾಗಿತ್ತು. ಇಲ್ಲಿ ಸಲ್ಲುವರು ಅಲ್ಲಿಯೂ ಸಲ್ಲುವರು ಎಂಬ ಸೂತ್ರವಿಡಿದು ಮೊದಲು ಇಲ್ಲಿ ಸಲ್ಲುವ ಕೆಲಸ ಮಾಡು, ಅಲ್ಲಿಯದು ತಾನಾಗಿಯೇ ನಿನ್ನೆಡೆಗೆ ದಮ್ಯಯ್ಯಾ ಅಂತ ಬರುತ್ತೆ ಎಂಬ ಇಹಪರ ಕುರಿತ ಸಹಜ ಮನೀಷೆ ಅವರದು. ಅಂತೆಯೇ ಲೋಕವನ್ನು

ಮರೆತದ್ದು ಧರ್ಮವಲ್ಲ. ಮಾನವನ ಬೌದ್ಧಿಕ ಮಾನಸಿಕ ವಿಕಾಸಕ್ಕೆ ಸಹಕರಿಸದಿರುವುದು ಆಧ್ಯಾತ್ಮವೂ ಅಲ್ಲ, ಅನುಭಾವವೂ ಅಲ್ಲ. ಯಾವುದೇ ಆಧ್ಯಾತ್ಮಪರ ಚಿಂತನೆ ಇದ್ದರೂ ಅದಕ್ಕೆ ಇಹದ ಮುದ್ರೆ ಬೀಳಲೇಬೇಕು. ಇಲ್ಲವಾದರೆ ಅದಕ್ಕೆ ಚಿಕ್ಕಾಸಿನ ಕಿಮ್ಮತ್ತೂ ಇಲ್ಲ. ಅತೀಂದ್ರಿಯ ಗ್ರಾಹ್ಯವೆನಿಸಿದ ಅನುಭಾವವಿರುವುದೂ ಐಂದ್ರಿಯ ಸಂಘಟಿತ ಶರೀರದಲ್ಲಿ ಎಂಬ ಪ್ರಬಲ ನಂಬುಗೆ ಶರಣರದು. ಆ ಕಾರಣದಿಂದಲೇ ಅವರು ಇಹವನ್ನು ಪರದೆಡೆಗೆ ಕೊಂಡೊಯ್ಯಲಿಲ್ಲ ಪರವನ್ನೇ ಇಹದೆಡೆಗೆ ಸೆಳೆದು ತಂದರು. ಪರಶಿವನನ್ನು ಬೇರೆಲ್ಲೂ ಹುಡುಕಿಕೊಂಡು ಹೋಗಲಿಲ್ಲ. ತಮ್ಮಲ್ಲಿಯೇ ತಮ್ಮ ಹೃನ್ಮಂದಿರದಲ್ಲಿಯೇ ಕಂಡು ಚಾಪಿಸಿದರು. ತನ್ಮೂಲಕ ತಮ್ಮ ದೇಹವನ್ನು ಜಂಗಮ ದೇವಾಲಯವನ್ನಾಗಿಸಿ ಕೊಂಡರು.

ಈ ದಿಸೆಯಲ್ಲಿ ಸಿದ್ಧರಾಮಣ್ಣ ಎಲ್ಲ ಶರಣರಿಗಿಂತಲೂ ಒಂದು ಕೈ ಮಿಗಿಲಾಗಿ ಗೋಚರಿಸುತ್ತಾರೆ. ಅವರ ಕಾಯಕ ನಿಷ್ಠೆ, ಕ್ರಿಯಾಶೀಲತೆ, ಕರ್ತೃತ್ವಶಕ್ತಿ, ಜನಪರಧೋರಣೆ ಮೊದಲಾದ ಲೋಕಸಂಗ್ರಹ ಕಾರ್ಯದಲ್ಲಿ ತಮ್ಮನ್ನು ತಾವು ಗುರುತಿಸಿಕೊಂಡು, ಮಾನವೀಯ ಮೌಲ್ಯಗಳನ್ನು ಎತ್ತಿ ಹಿಡಿದ, ಬಿತ್ತಿ ಬೆಳೆದ ಮಹಾನುಭಾವರಾಗಿದ್ದಾರೆ. ಮಾನವೋದ್ಧಾರವೇ ತನ್ನ ಮಹಾದೇವನ ಆರಾಧನೆ ಎಂದು ಭಾವಿಸಿದ್ದ ಈ ಪೂಜ್ಯನ ಸರ್ವೋತ್ಕೃಷ್ಟ, ಸರ್ವಮಾನ್ಯ ಉದ್ಘೋಷಿತ ಸಂದೇಶವನ್ನು ಶಿವಕವಿ, ಮಹಾಕವಿ ರಾಘವಾಂಕ ತನ್ನ 'ಸಿದ್ಧರಾಮ ಚಾರಿತ್ರ'ವೆಂಬ ಕಾವ್ಯಕಂಠಾಹಾರದಲ್ಲಿ ಎದ್ದು ಕಾಣುವೆಡೆಯಲ್ಲಿ ಅದ್ದು ಅಳವಡಿಸಿದ್ದಾನೆ. ಶಿವಯೋಗಿಯ ಶರೀರಮಾದೊಡಂ ವೃಥಾ ಸವೆಯಲಾಗದು ಅನುಗೊಂಬನಿತು ಕಾಯಕಂ ನಡೆಯುತ್ತಿರಬೇಕು– ಎಂದು ಇದಕ್ಕೊಂದು ಸುಂದರ 'ಸ್ವಪ್ನಪ್ರತಿಮೆ'ಯನ್ನು ಸೃಷ್ಟಿಸಿದ್ದಾನೆ. ಒಮ್ಮೆ ಶಿವ ಪಾರ್ವತಿಯರು ಗಗನಮಂಡಲದಲ್ಲಿ ವಿಹಾರ ಕೈಗೊಂಡಿದ್ದರಂತೆ. ಆ ಸಂದರ್ಭದಲ್ಲಿ ಸೊನ್ನಲಿಗೆಯಲ್ಲಿ ಶಿವಯೋಗಿ ಸಿದ್ಧರಾಮ ತನ್ನ ಗುಡ್ಡ(ಶಿಷ್ಯ)ರ ಜೊತೆಯಲ್ಲಿ ತಟಾಕ ನಿರ್ಮಾಣ ಕಾರ್ಯದಲ್ಲಿ ತೊಡಗಿದ್ದುದನ್ನು ಕಂಡರಂತೆ. ಶಿವೆಯ ಅಪೇಕ್ಷೆಯ ಮೇರೆಗೆ ಶಿವ ಪುಣ್ಯನದಿಗಳನ್ನು ಭೂಮಂಡಲಕ್ಕೆ ಕಳುಹಿಸಿ ಕೊಟ್ಟನಂತೆ. ಅವರು ಇಳೆಗವತರಿಸಿ, ಸಿದ್ಧರಾಮನ ಕನಸಿನಲ್ಲಿ ದರ್ಶನ ವೀಯುತ್ತಾರೆ. ಶಿವಯೋಗಿ ಕೇಳುತ್ತಾನೆ 'ವನಿತೆಯರು ನೀವಾರು?' ಗಂಗೆ, ತುಂಗೆ, ಕೃಷ್ಣೆ, ಕಾವೇರಿ ಮೊದಲಾದ ದೇವಲೋಕದ ಜನದೇವತೆಯರು! 'ಯಾರು ಕಳುಹಿದರು?' 'ಶಿವ' ಏಕೆ? 'ನೀವು ತಟಾಕ ನಿರ್ಮಾಣದಲ್ಲಿ ಪಡುವ ಶ್ರಮ ನೋಡಲಾರದೆ ನಾವಿಲ್ಲಿ, ಕೆರೆಯಾಗಿ, ತೊರೆಯಾಗಿ, ದೋಣೆಯಾಗಿ, ಕೂಸುಗಳಾಗಿ ನೆಲೆ ನಿಲ್ಲುತ್ತೇವೆ. ನೀವು ವೃಥಾ ಶ್ರಮ ಪಡುವುದು ಬೇಡ!'.

'ತಾಯಂದಿರ, ಶಿವಯೋಗಿಯ ಶರೀರವೆ ಆಗಿರಬಹುದು. ಆದರದು ವ್ಯರ್ಥವಾಗಿ, ಭೂಮಿಗೆ ಭಾರವಾಗಿ ಬದುಕಬಾರದು. ಅದರಲ್ಲಿ ಜೀವಚೇತನವಿರುವ ತನಕವೂ ಕಾಯಕವನ್ನು ಮಾಡಿಯೇ ತೀರಬೇಕು ಇದು ಅನಿವಾರ್ಯ'.

ಈ ವಾಕ್ಯ ಒಂದು ವಿಸ್ತೃತ ವ್ಯಾಖ್ಯಾನವನ್ನೇ ಬಯಸುತ್ತದೆ. ಸಂಕ್ಷಿಪ್ತವಾಗಿ ಹೇಳುವುದಾದರೆ ಸಂಸಾರಿ ತನಗೆ, ತನ್ನವರಿಗೆ ಹಾಗೂ ತನ್ನ ಕುಟುಂಬ ವರ್ಗಕ್ಕಾಗಿ ದುಡಿಯಲೇಬೇಕು. ಆದರೆ ಸಂಸಾರದ ಸಂಕೋಲೆಯೇ ಇಲ್ಲದ ಸರ್ವಸಂಗ ಪರಿತ್ಯಾಗಿಯಾದ ಸನ್ಯಾಸಿ ಏಕೆ ದುಡಿಯಬೇಕು? ಎಂಬ ಪ್ರಶ್ನೆಗೆ ಅಣ್ಣ ಸಿದ್ಧರಾಮಣ್ಣನ ಉತ್ತರ, 'ದುಡಿಯಬೇಕು ಅವನೂ ದುಡಿದುಣ್ಣಬೇಕು' ಅನ್ಯರ ದುಡಿಮೆಯನ್ನು ತಿನ್ನುವ ಹಕ್ಕು ಅವನಿಗೂ ಇಲ್ಲ. ಯಾವುದಾದರೂ ಒಂದು ಕಾಯಕದಲ್ಲಿ ತನ್ನನ್ನು ತಾನು ತೊಡಗಿಸಿಕೊಂಡು ತನ್ನ ಅನ್ನವನ್ನು ತಾನು ದುಡಿದು ತಿನ್ನಬೇಕು. ದುಡಿಮೆಯೇ ದೇವರು ಶಿವಯೋಗಿಗೂ ಕೂಡ. ಆದ್ದರಿಂದ ಕಾಯಕ ವಿಚಾರದಲ್ಲಿ ಪಕ್ಷಪಾತ ಇಲ್ಲ. ಸನ್ಯಾಸಿಗೂ ಅದರಿಂದ ರಿಯಾಯಿತಿ ಇಲ್ಲ. ಇಂತಹ ಕಟುಸತ್ಯ ಸಿದ್ಧರಾಮಣ್ಣನದು. ಅದಕ್ಕೆ ಸಾಕ್ಷಿ 'ಕೃಷಿಯ ಮಾಡಿ ಉಣ್ಣದೆ ಹಸಿವು ಹರಿವ ಪರಿಯಿನ್ನೆಂತೊ ಕರ್ಮಯೋಗವ ಮಾಡದೆ ನಿರ್ಮಲ ಸುಚಿತ್ತವನರಿವ ಪರಿಯೆನ್ನೆಂತೊ' ಇದರಿಂದ ವೇದ್ಯವಾಗುತ್ತದೆ ವ್ಯಕ್ತಿ ಯಾವನೇ ಇರಲಿ ಅನ್ಯರ ಹಂಗಿನ ಅನ್ನಕ್ಕೆ ಕೈಚಾಚಬಾರದು. ತಾನು ದುಡಿದದ್ದರಲ್ಲಿ ಸಿಗುವಷ್ಟು ತೃಪ್ತಿ ಅನ್ಯರ ದುಡಿಮೆಯನ್ನು ತಿನ್ನುವುದರಲ್ಲಿ ಸಿಗದು. ಭಕ್ತರ ಮನೆಯಲ್ಲಿ ಉಂಡು, ಬಸವಣ್ಣನ ಗುಡಿಯಲ್ಲಿ ನಿದ್ದೆ ಹೊಡೆಯುವ ಉಂಡಾಡಿ ನಿಜಕ್ಕೂ ಇಂದು ಸಮಾಜಕ್ಕೆ ಹೊರೆ ಭೂಮಿಗೆ ಭಾರ! ಅಂತಹವನನ್ನು ನಿಜಕ್ಕೂ ಇಂದು ಸಮಾಜಕ್ಕೆ ಹೊರೆ ಭೂಮಿಗೆ ಭಾರ! ಅಂಥವನನ್ನು ಶರಣ ಸಂಸ್ಕೃತಿ ಸರ್ವಥಾ ಸ್ವಾಗತಿಸುವುದಿಲ್ಲ. ಈ ಕಾಯಕ ನಿಷ್ಠೆ ಕ್ರಿಯಾಶೀಲತೆಯಿಂದಾಗಿ ಕಾಯಕಯೋಗಿ ಸಿದ್ಧರಾಮ ಶ್ರೀಸಾಮಾನ್ಯನಿಗೂ ಅತ್ಯಂತ ಸಮೀಪಗತ ವ್ಯಕ್ತಿಯಾಗಿದ್ದಾನೆ.

ಈ ಕಾಯಕಯೋಗಿ ಶಿವಯೋಗಿಯೂ ಆಗಿರುವುದು ಮತ್ತೊಂದು ವೈಶಿಷ್ಟ್ಯ ಯೋಗ ಎಂದರೆ ಎರಡು ಶಕ್ತಿಗಳು





ಜಡಗೂಡುವಿಕೆ, ಒಡಬೆರೆಯುವಿಕೆ. ಸಿದ್ಧರಾಮ ಮೊದಲು ಕಾಯಕದಲ್ಲಿ ಬೆರೆತಿದ್ದಾನೆ. ಕಾಯಕದಲ್ಲಿ ಒಂದಾಗಿದ್ದಾನೆ. ಕಾಯಕವೇ ತಾನಾಗಿದ್ದಾನೆ! ಆ ಮೂಲಕ ಶಿವನೊಡನೆ 'ಶಿವ' ಅಥವಾ 'ಶೂನ್ಯ' ಆಗಲು ಯತ್ನಿಸಿ ಯಶಸ್ವಿಯಾಗಿದ್ದಾನೆ. ಜ್ಞಾನಮಾರ್ಗವನ್ನು ವ್ಯೋಮಮೂರುತಿ ಅಲ್ಲಮನಿಗೆ ಬಿಟ್ಟು, ಭಕ್ತಿಮಾರ್ಗವನ್ನು ಅಣ್ಣ ಬಸವಣ್ಣನಿಗೆ ಬಿಟ್ಟು, ತಾನು ತನ್ನದಾದ ಕ್ರಿಯಾಮಾರ್ಗವನ್ನು ಹಿಡಿದಿದ್ದಾನೆ. ಅದರ ಮುಖಾಂತರ ಅಂದರೆ ಕಾಯಕ ಯೋಗದ ಮುಖಾಂತರ ಶಿವಯೋಗವನ್ನು ಸಾಧಿಸಿದ ಮಹಾಶಿವಯೋಗಿಯಾಗಿದ್ದಾನೆ.

ಶಿವಯೋಗಿ ಸಿದ್ಧರಾಮಣ್ಣನ ಕಾಯಕಾಂದೋಲನದಿಂದಾಗಿ ಪ್ರತಿ ವ್ಯಕ್ತಿಯಲ್ಲೂ ಆರ್ಥಿಕ ಸ್ವಾವಲಂಬನೆ, ಆತ್ಮಾಭಿಮಾನ, ದಾಸೋಹ ಔದಾರ್ಯಗಳು ಮೆರೆದಾಡಿದವು, ಭಕ್ತರ ಬದುಕಿನಲ್ಲಿ ಕಾಯಕದ ಛಾಪು ಮೂಡಿಸಿದ ಈ ಮಹಾಮಹಿಮ ಬಸವಣ್ಣನ ಸಮಾಜೋ–ಧಾರ್ಮಿಕ ಕ್ರಾಂತಿಯಲ್ಲಿ ಮುಂಚೂಣಿಯಲ್ಲಿದ್ದು ಶ್ರೇಷ್ಠ ಸಮಾಜ ಸುಧಾರಕನೆಂಬ ಅಗ್ರಮಾನ್ಯ ಗೌರವಕ್ಕೂ ಪಾತ್ರನಾಗಿದ್ದಾನೆ.

ಸಿದ್ಧರಾಮಣ್ಣನ ಶಿವಯೋಗ ಅಗ್ರಾಹ್ಯವಾದದ್ದೇನೂ ಅಲ್ಲ, ಗ್ರಾಹ್ಯವಾದದ್ದು, ಗಣನೀಯವೂ ಆದದ್ದು. ಬ್ರಹ್ಮಜ್ಞಾನಿಗೆ ಭಗವಂತ ಒಂದು ಬೆಳಕಾಗಿ, ಹೊಳಹಾಗಿ, ಕಾಂತಿಯಾಗಿ, ತೇಜಸ್ಸಾಗಿ ಗೋಚರಿಸಬಹುದು. ಹಲವರಿಗೆ ಗೋಚರಿಸದೆ ಇರಲೂಬಹುದು. ಅದರಿಂದಾಗಿ ಉಪನಿಷತ್ಕಾರರು ಆ ಅತೀತ ಶಕ್ತಿಯಾದ 'ಶಿವ'ನನ್ನು ಅಚಿಂತ್ಯ, ಅನೂಹ್ಯ ಎಂದು ಸಾರಿ, ನಿರ್ಗುಣ, ನಿರಾಕಾರ ಎಂದು ಹೊಗಳಿ ಕೈಚೆಲ್ಲಿ ಕುಳಿತುಬಿಟ್ಟರು. ಆದರೆ ಆಧ್ಯಾತ್ಮಿಗಳು ಕೆಲವರು ಅದಕ್ಕೆ ಯದ್ಭಾವಂ ತದ್ಭವತಿ ಎಂದು ತಿದ್ದುಪಡಿ ಸೂಚಿಸಿದರು. ಶಿವಯೋಗಿ ಸಿದ್ಧರಾಮ ಜನ್ಮತಃ 'ಭಾವಾ ಇದ್ದಾಂಗ ದೇವ!' ಎಂದೇ ನಂಬಿದ್ದವ, ಅದನ್ನೇ ಸಾಧಿಸಿ ತೋರಿಸಿದವ. ದೈವ ಎಂಬುದೊಂದು ವ್ಯಕ್ತಿಗತ ಕಲ್ಪನೆ. ಅದನ್ನು ಅವನು ಶಿವ, ಪಾರ್ವತಿ, ವಿಷ್ಣು, ಬ್ರಹ್ಮ, ಮಾರಿ, ಯಾವ ರೂಪದಲ್ಲಿ ಬೇಕಾದರೂ ಸಾಕ್ಷಾತ್ಕರಿಸಿಕೊಳ್ಳಬಹುದು ಎಂದು ಸಗುಣ ಸಾಕಾರರೂಪಿ ದೈವದ ಆಯ್ಕೆಯ ಹಕ್ಕನ್ನು ಶ್ರೀಸಾಮಾನ್ಯನಿಗಿತ್ತ. ತನ್ಮೂಲಕ ಪರವಸ್ತು ಎಂಬುದು ಸಾಮಾನ್ಯನ ಚಿಂತನೆಗೂ ತೆರೆದುಕೊಳ್ಳುವ, ಊಹೆಗೂ ಎಟಕುವ ವಸ್ತುವಾಯಿತು. ಅವನ ದೃಶ್ಯಾಭಾವ ದೋಷದಿಂದ ಮುಕ್ತವಾಯಿತು. ಸಾಕಾರದೌಪಾಸನೆಗೆ ಒತ್ತುಕೊಟ್ಟು ಸಾರಿದ.

*'ಸಾಕಾರನಿಷ್ಠೆ, ಸರ್ವಭೂತಂಗಳೊಳು ಅನುಕಂಪೆ ತಾನೆ ಪರಬೊಮ್ಮ !'*

*ಇದು ಶಿವಯೋಗಿ ಸಿದ್ಧರಾಮನ ಅನುಭಾವಿಕ ದರ್ಶನ!*

ಭಗವಂತನನ್ನು ಪ್ರತಿನಿಧಿಸುವ ವಸ್ತು ಶಿವ ಆಗಿರಬಹುದು, ವಿಷ್ಣು ಆಗಿರಬಹುದು, ಯಾವುದೇ ಆಗಿರಬಹುದು ಅದರ ಬಗೆಗೆ ಭಕ್ತನಾದವನಿಗೆ ತುಂಬು ನಂಬಿಕೆಯಿರಬೇಕು, ಭಕ್ತಿ ಇರಬೇಕು. ಅಮಿತ ನಿಷ್ಠೆ ನೆಲೆಗೊಂಡಿರಬೇಕು. ಇವಿಲ್ಲವಾದರೆ ಭಗವಂತನಿದ್ದಾನೆ ಎಂಬ ಅರಿವು ಮೂಡುವುದಾದರೂ ಹೇಗೆ? ಭಕ್ತಿಯಿದ್ದಲ್ಲಿ ಮಾತ್ರ ಶಕ್ತಿಯ ಆವಿರ್ಭಾವ! ಆದ್ದರಿಂದ ಶಿವಯೋಗಿ ಸಿದ್ಧರಾಮನ ಮೊದಲ ಸಂದೇಶ ಸಾಕಾರದಲ್ಲಿ ನಿಷ್ಠೆಯಿಟ್ಟುಕೊಳ್ಳುವುದು. ಎರಡನೆಯ ಸಂದೇಶ 'ಸಕಲಜೀವ ದಯಾಪರನಾಗುವುದು!' ಅಂದರೆ ಜಗತ್ತಿನ ಸಮಸ್ತ ಜೀವಕೋಟಿಯ ಬಗೆಗೂ ಅನುಕಂಪೆಯುಳ್ಳವರಾಗಿರಬೇಕು. ಇದರರ್ಥ 'ಅಯ್ಯೋಪಾಪ!' ಎಂದು ಮೊಸಳೆ ಕಣ್ಣೀರು ಕರೆಯುವುದಲ್ಲ, ಅನ್ಯಜೀವಿಗಳಿಗಾದ ನೋವು ತನಗಾದ ನೋವೆಂದು ಭಾವಿಸುವುದು, ಅನ್ಯರ ಯಶಸ್ಸು ಕಂಡು ಕರುಬದಿರುವುದು. ಇಂತಹ ಅಲೌಕಿಕ ಭಗವದ್ಭಕ್ತಿ ಮತ್ತು ಲೌಕಿಕ ಜೀವಕೋಟಿಗಳಲ್ಲಿ ಪ್ರೀತಿ–ಈ ಎರಡು ಗುಣಮಣಿಗಳಿದ್ದರೆ ಸಾಕು ವ್ಯಕ್ತಿ 'ತಾನೆ ಪರಬೊಮ್ಮ' ಅಂದರೆ 'ಶಿವ' ಅಥವಾ ಶೂನ್ಯ ಆಗಲಿಕ್ಕೆ ಎಂಬುದು ಸಿದ್ಧರಾಮನ ನ್ಯಾಯಸಮ್ಮತ ಮನೀಷೆ.

ಈ ಬಗೆಯು 'ಶೂನ್ಯಸಂಪಾದನೆಯ' ಸೂತ್ರದಾರಿ ಸಿದ್ಧರಾಮನಿಗೆ ಪತಂಜಲಿಯ ಯೋಗಸೂತ್ರ ಪ್ರಮಾಣಭೂತವಾಗಲಿಲ್ಲ. ಅದಕ್ಕಾಗಿ ತನ್ನದೇ ಆದ ಒಂದು ವ್ಯಾಖ್ಯಾನ ಸೂತ್ರವನ್ನು ರೂಪಿಸಿಕೊಟ್ಟ, ಅದು ಹೀಗಿದೆ;

*ಅಧಾರ ಸ್ವಾಧಿಷ್ಠಾನ ಮಣಿಪೂರಕ ಅನಾಹತ ವಿಶುದ್ಧಿ*
*ಆಜ್ಞೆ ಎಂದೆಂಬರೆಲ್ಲಾ ಈ ಆದ ಬಲ್ಲಡೆ ನೀವು ಹೇಳಿರೆ –*
*ಆದಿಯುಳ್ಳುದೆ ಆಧಾರ; ಆ ಆಧಾರವ ಕೂಡಿಪ್ಪುದೆ*
*ಸ್ವಾಧಿಷ್ಠಾನ; ಮಣಿಯ ಬೆಳಗಿನಲ್ಲಿಪ್ಪುದೆ ಮಣಿಪೂರಕ,*
*ಆಸೆಯಿಲ್ಲದುದೆ ಅನಾಹತ;*
*ಅಲ್ಲ ಅಹುದೆಂಬುದನತಿಗಳೆದಿಹುದೆ ವಿಶುದ್ಧಿ;*
*ಸರ್ವಜೀವಂಗಳಲ್ಲಿ ದಯವನುಳ್ಳದೆ ಆಜ್ಞೆ;*
*ಇಂತಿಪ್ಪುದೀಗ ಶಿವಯೋಗ*
*ಉಳಿದ ಅಭ್ಯಾಸ ಯೋಗಿಗಳ ಕಂಡು ನಗುತಿರ್ದನಯ್ಯಾ*
*ಕಪಿಲಸಿದ್ಧಮಲ್ಲಿಕಾರ್ಜುನಯ್ಯಾ*

(ಆರ್.ಸಿ. ಹಿರೇಮಠ ಸಂಪಾದಿತ ಶ್ರೀ ಸಿದ್ಧರಾಮೇಶ್ವರ

ವಚನಗಳು(೧೯೭೮), ವಚನ ೧೦೪೭, ಪುಟ ೩)

ಯೋಗಪರವಾದ ಕುಂಡಲಿನೀ ಶಕ್ತಿಯ ನೆಲೆಗಳೆನಿಸಿದ ಷಟ್‌ಚಕ್ರಗಳ ವಿಶಿಷ್ಟ ಶಿವಯೋಗ ಸಾಧನೆಯನ್ನು ಸಿದ್ಧಿಸಿಕೊಂಡ 'ಸಿದ್ಧಪುರುಷ' ಸಿದ್ಧರಾಮನ ಲೌಕಿಕ, ಆಮುಷ್ಮಿಕ, ಅನುಭವ, ಅನುಭಾವಗಳು ದರ್ಶನ, ದೈವಗಳು ವಿಶುದ್ಧ ವಿನೂತನ ಭಾಷ್ಯವನ್ನೇ ಬಯಸುತ್ತವೆ ಎಂದು ಹೇಳಬಹುದು. ಶಿವಯೋಗಿಯ 'ತಾನೆ ಪರಬೊಮ್ಮ' ಎಂಬಲ್ಲಿ 'ಅಹಂ ಬ್ರಹ್ಮಾಸ್ಮಿ' ಭಾವ ಅಡಗಿಲ್ಲ. ಅದಕ್ಕೆ ಬದಲು ಶಕ್ತಿ ವಿಶಿಷ್ಟಾದ್ವೈತ ದರ್ಶನದ ದ್ಯುತಿಯಂತೆ ಲಿಂಗ-ಅಂಗ ಸಾಮರಸ್ಯ ಅಡಗಿದೆ, ಶಿವಯೋಗದ ಸಿದ್ಧಿ ಗರ್ಭೀಕೃತವಾಗಿದೆ. ಅಲ್ಲಿ 'ಸಾಕಾರನಿಷ್ಠೆ ಸರ್ವಭೂತಗಳೊಳನುಕಂಪೆಯಿಂದ ತಾನೆ 'ಪರಬೊಮ್ಮ' ಎಂಬ ದಿವ್ಯದರ್ಶನ ಸಾಧಿತ.

ಶರಣರು ಯಾರೂ ಅಂಗೈಯಲ್ಲಿ ಆಕಾಶ ತೋರಿಸಿದವರಲ್ಲ. ಅಂದರೆ ಬರೀ ತತ್ತ್ವ ಭೋಧನೆ ಮಾಡಿದವರಲ್ಲ. ಮತ್ತೆ, ನಾನು ಹೇಳಿದಂತೆ ಮಾಡು, ನಾನು ಮಾಡಿದಂತೆ ಮಾಡಬೇಡ ಎಂಬ ಅನ್ಯರ ಬೋಧನೆಯ ಕ್ರಮವೂ ಅವರದಲ್ಲ. ಅವರ ಎಲ್ಲ ತತ್ತ್ವಸಿದ್ಧಾಂತಗಳಿಗೂ ತಾವೇ ಪ್ರಯೋಗ ಆಗಿದ್ದಾರೆ! ಕರ್ಮಯೋಗಿ ಸಿದ್ಧರಾಮಣ್ಣ ತಾನು ಹೇಗೆ ನುಡಿದನೊ ಹಾಗೆ ನಡೆದವನು ಕೂಡ. ತನ್ನ ಸಿದ್ಧಾಂತವನ್ನು ಪೂರ್ಣರೂಪದಲ್ಲಿ ಅನುಷ್ಠಾನಗೊಳಿಸಿದವನೂ ಅವನೇ! ಜಗತ್ತಿನ ಜನಜಾಗ್ರತಿಗಾಗಿ, ಅವರಲ್ಲಿ ಆಸ್ತಿಕತೆ ಸದಾ ಜ್ವಲಂತವಾಗಿರಲೆಂದು ತನ್ನ ಆಧ್ಯಾತ್ಮದ ನೆಲೆವೀಡಾದ ಸೊನ್ನಲಿಗೆಯಲ್ಲಿ (ಇಂದಿನ ಸೊಲ್ಲಾಪುರದಲ್ಲಿ) ಕಪಿಲಸಿದ್ಧಮಲ್ಲಿಕಾರ್ಜುನ ಮಹಾಮೂರ್ತಿಯನ್ನು ಸ್ಥಾಪಿಸಿದ ಅವನನ್ನು ತನ್ನ ಮನಪುಷ್ಪದಿಂದ ಪೂಜಿಸಿದ. (ಡಾ॥ ಎಂ.ಎಂ. ಕಲಬುರ್ಗಿ ಮತ್ತು ಸಾ.ಶಿ. ಮರುಳಯ್ಯ ಸಂಪಾದಿತ ಸಿದ್ಧರಾಯಮ್ಮ ದೇವರ ವಚನಗಳು(೧೯೭೮) ವಚನ; ೨೨, ಪುಟ೭) ಅದರ ಮೇಲೆ ಒಂದು ಭವ್ಯ ದೇವಾಲಯವನ್ನು ನಿರ್ಮಿಸಿದ. ಅದು ಆಧ್ಯಾತ್ಮಗಳ ಆಡುಂಬೊಲವಾಯಿತು, ಮುಮುಕ್ಷಗಳ ತೇಜೋಬಲವಾಯಿತು! ಪಶುಪಕ್ಷಿಗಳಿಗೆ ನೀರುಣಿಸುವ ಸಲುವಾಗಿ ಹಿಂದೆಯೇ ಹೇಳಿದಂತೆ ಸೊನ್ನಲಿಗೆಯಲ್ಲಿ ತಾನೇ ನಿಂತು ತನ್ನ ಗುಡ್ಡರ ನೆರವಿನಿಂದ ಒಂದು ತಟಾಕ(ಕೆರೆ)ಯನ್ನು ಕಟ್ಟಿದ, ಬಡಬಗ್ಗರಿಗೆ ಮದುವೆಯ ಮಂಗಲ ಕಾರ್ಯಗಳನ್ನು ನೆರವೇರಿಸುವ ಮೂಲಕ ಸಾಮೂಹಿಕ ವಿವಾಹ ಪದ್ಧತಿಯನ್ನು ಜಾರಿಗೆ ತಂದಿದ್ದಾನೆ. ಇವುಗಳಷ್ಟೇ ಅಲ್ಲ ವಿಭೂತಿಪುರುಷ ಸಿದ್ಧರಾಮನ ಮತ್ತೊಂದು ಮಹತ್ವದ ಸಾಧನೆಯೆಂದರೆ ಪುರುಷ ಪ್ರಧಾನ ಸಮಾಜದಲ್ಲಿ ತನ್ನ ಅಸ್ತಿತ್ವವನ್ನೇ ಕಳೆದುಕೊಂಡು ಪಶುವಿಗೂ ಕಡೆಯಾದ ಬಾಳು ಸಾಗಿಸುತ್ತಿದ್ದ ಹೆಣ್ಣಿಗೆ ಒಂದು ಗೌರವದ ಸ್ಥಾನ ದೊರಕಿಸಿಕೊಟ್ಟಿದ್ದು ಹೇಳುತ್ತಾನೆ

*ಹೆಣ್ಣು ಹೆಣ್ಣಲ್ಲ ಹೆಣ್ಣು ರಕ್ಕಸಿಯಲ್ಲ*
*ಹೆಣ್ಣು ಪ್ರತ್ಯಕ್ಷ ಕಪಿಲಸಿದ್ಧಮಲ್ಲಿಕಾರ್ಜುನ*

ಎಂದು ಇಂತಹ ದೈವತ್ವದ ಸ್ಥಾನವನ್ನಿತ್ತ ಮಹಾಪುರುಷ ಸಿದ್ಧರಾಮೇಶ್ವರನಿಗಿಂತ ಹಿಂದೆ ಹುಟ್ಟಿಲ್ಲ, ಮುಂದೆ ಹುಟ್ಟುವ ಭರವಸೆಯೂ ಇಲ್ಲ. ಹೆಣ್ಣು ಎಂಬುದೊಂದು ಪುರುಷನ ಭೋಗವಸ್ತು ಎಂಬ ದುರ್ಭಾವನೆ ತಾಂಡವವಾಡುತ್ತಿದ್ದ ಕಾಲದಲ್ಲಿ, ಅವಳು ವಧ್ಯಳಲ್ಲ, ವಂದ್ಯದೇವತೆ. ಅಣುರೇಣು ತೃಣಕಾಷ್ಠದಲ್ಲೂ ನೂತನ ಚೇತನವಗಿ ಸ್ಪಂದಿಸುವ ಆದಿಶಕ್ತಿ, ಜಗತ್‌ಶಕ್ತಿ, ಪರಾತ್ಪರಶಕ್ತಿ, ಕ್ರಿಯಾಶಕ್ತಿ, ಅವಳು ಜಗನ್ಮಾತೆ, ಸಾಕ್ಷಾತ್ ಶಿವಸ್ವರೂಪಿಣಿಯಲ್ಲದೆ ಬೇರೆ ಅಲ್ಲ. ಅವಳೇ ನನ್ನ ಪರಮಾರಾಧ್ಯದೈವ ಕಪಿಲ ಸಿದ್ಧಮಲ್ಲಿಕಾರ್ಜುನ ತೇಜೋಅಂಶ ಎಂಬುದಾಗಿ ಘೋಷಿಸುವ ಮೂಲಕ ಹೆಣ್ಣಿನ ಅಮೋಘ, ಅನ್ಯಾದೃಶ ಸ್ಥಾನವಿತ್ತಿದ್ದಾನೆ. ತನ್ಮೂಲಕ ಇಡೀ ಜಗತ್ತಿನ ಎಲ್ಲ ಮಹಿಳೆಯರ ಗೌರವಾದರಗಳಿಗೆ ಪಾತ್ರನಾಗಿದ್ದಾನೆ. ಈ ಬಗೆಯ ಲೋಕಹಿತ, ಅಲೌಕಿಕ ಸಾಧಿತ ಕಾರ್ಯಗಳನ್ನೆಸಗಿ ಲೋಕಪೂಜ್ಯವಾಗಿದ್ದಾನೆ.

ಇಂತಿದ್ದರೂ ಈ ಮಹಾನುಭಾವನ ಬಗೆಗೆ ಕನ್ನಡಿಗರು ಅಷ್ಟಾಗಿ ಚಿಂತಿಸಿಲ್ಲ ಎಂಬ ಕೊರಗಿದೆ. ರಾಘವಾಂಕನಾದ ಮೇಲೆ ಅವನ ಬದುಕು, ಬರಹ, ಧ್ಯೇಯ, ದರ್ಶನಗಳ ಬಗೆಗೆ ಕೃಷಿ ನಡೆಸಿಲ್ಲ. ಇದು ವಿಷಾದದ ಸಂಗತಿ. ಕಾಯಕದ ಕೈದೀವಿಗೆ, ನಿಷ್ಠೆಯ ಮೌನಸ್ತಂಭ ಶ್ರೀ ಸಿದ್ಧರಾಮೇಶ್ವರರ ಅಂತರಾತ್ಮಕ್ಕೆ ಮನಸಾಮಣಿದು, ಆ ಮಹಾನ್ ಚೇತನವನ್ನು ಕುರಿತ ಸೊಡ್ಡಳ ಬಾಚರಸನ ವಚನದೊಂದಿಗೆ ಈ ಲೇಖನಕ್ಕೆ ಬಿಡುವು ಕೊಡುತ್ತೇನೆ.

*ಉಂಡುಂಡು ಜರಿದವನು ಯೋಗಿಯೆ?*
*ಅಶನಕ್ಕೆ ಅಳುವವನು ಯೋಗಿಯೆ?*
*ವ್ಯಸನಕ್ಕೆ ಮರುಗುವವನು ಯೋಗಿಯೆ?*
*ಆದಿವ್ಯಾಧಿಯುಳ್ಳವನು ಯೋಗಿಯೆ?*
*ಯೋಗಿಗಳೆಂದಡೆ ಮೂಗಣಗಳೆ ಕೊಯ್ಯುವೆ*
*ಯೋಗಿಗಳ ಯೋಗಿ ಶಿವಯೋಗಿ ಸೊಡ್ಡಳಾ*
*ಸಿದ್ಧರಾಮನೊಬ್ಬನೇ ಶಿವಯೋಗಿ!*

❖







## ನಮ್ಮ ಪಯಣ ಎತ್ತಕಡೆಗೆ ?

-ರೇಣುಕಾರಾಧ್ಯ ಎಸ್. *

ಆಗಿನ್ನೂ ಬುದ್ಧನಾಗಲಿ, ಕನ್‌ಫ್ಯೂಷಿಯಸ್, ಲಾವೋತ್ಸೆ ಏಸು, ಝರತುಷ್ಟ್ರ, ಪೈಗಂಬರ್ ಯಾರೊಬ್ಬರೂ ಜನಿಸಿರಲಿಲ್ಲ. ನಾಗರಿಕತೆಯ ತುತ್ತತುದಿಯಲ್ಲಿರುವ ಇಂದಿನ ಯುರೋಪ್, ಅಮೆರಿಕಾಗಳು ಅಂಧಕಾರದಲ್ಲಿ ಮುಳುಗಿ ಹೋಗಿದ್ದ ಕಾಲ. ನಾಲ್ಕು ಸಾವಿರ ವರ್ಷಗಳಷ್ಟು ಹಿಂದೆಯೇ ಜಗತ್ತಿನ ಅನೇಕ ಜಟಿಲ ಸಮಸ್ಯೆಗಳಿಗೆ ಭಾರತ ಉತ್ತರವನ್ನು ಕಂಡುಕೊಂಡು ಗುರುವಿನ ಸ್ಥಾನದಲ್ಲಿತ್ತು. 'ನಮಕರ್ಮಣಾ, ನ ಪ್ರಜಯಾ, ಧನೇನ -ತ್ಯಾಗೇನೈಕೇ ಅಮೃತತ್ವ ಮಾನುಷು'. ಹೌದು ಮಾನವನಿಗೆ ಅಮೃತತ್ವ ಪ್ರಾಪ್ತಿಯಾಗಬೇಕಾದರೆ ಕರ್ಮ ಮಾಡುವುದರಿಂದಾಗಲೀ, ಪ್ರಜೋತ್ಪತ್ತಿಯಿಂದಾಗಲೀ ಇಲ್ಲವೆ ಧನಾರ್ಜನೆಯಿಂದಾಗಲಿ ಸಾಧ್ಯವಿಲ್ಲ. ಅಮೃತತ್ವ 'ತ್ಯಾಗ'ದಿಂದ ಮಾತ್ರವೇ ಪ್ರಾಪ್ತವಾಗುತ್ತದೆ. ಇನ್ನಾವುದರಿಂದಲೂ ಅದು ಸಾಧ್ಯವಿಲ್ಲ. ಇಂತಹ ದಿಟ್ಟ ನೇರ ಮಾರ್ಗವನ್ನು ಜಗತ್ತಿಗೆ ತೋರಿಸಿಕೊಟ್ಟದ್ದು ಮಾತ್ರವಲ್ಲದೆ ತಾನೂ ಸಹ ಆಚರಿಸಿ ತೋರಿಸಿತು. ಯೌವ್ವನದ ಹೊಸ್ತಿಲಲ್ಲಿದ್ದು, ಯುವರಾಜನಾಗಿ ಮೆರೆಯಬೇಕಾಗಿದ್ದ, ಅರಮನೆಯ ಸಕಲ ವೈಭವಗಳನ್ನೂ, ವೈವಾಹಿಕ ಜೀವನದ ಹೊಂಗಿರಣಗಳ ಸೊಬಗನ್ನು ಆಸ್ವಾದಿಸಬೇಕಾಗಿದ್ದ ಆ ಧೀರೋದಾತ್ತ ವ್ಯಕ್ತಿ ಶ್ರೀರಾಮ ತ್ಯಾಗಕ್ಕೆ ಮುಂದಾದ. ರಾಜ್ಯ-ಕೋಶ, ಅರಮನೆ, ಬಂಧು-ಜನ ಎಲ್ಲವನ್ನು ತ್ಯಾಗ ಮಾಡಿದ, ಕಾಡಿಗೆ ನಡೆದ, ಕಲ್ಲು ಬಂಡೆಗಳ ಮೇಲೆ, ಮರ-ಗಿಡಗಳ ಎಲೆಗಳ ಮೇಲೆ ಮಲಗಿದ. ಗೆಡ್ಡೆ ಗೆಣಸು ತಿಂದ, ನದಿ-ನದಗಳ ನೀರನ್ನು ಕುಡಿದ, ಸ್ವತಃ ಪತ್ನಿ ಸೀತಾದೇವಿ ಜೊತೆಯಲ್ಲಿದ್ದರೂ ನೈಷ್ಠಿಕ ಬ್ರಹ್ಮಚರ್ಯವನ್ನು ಪಾಲಿಸಿದ.

ಸುಸಜ್ಜಿತವಾದ ಅರಮನೆಗಳು, ಸುಂದರವಾದ ಮಡದಿ ಮಗು, ಎಲ್ಲಾ ಭೋಗ ಭಾಗ್ಯಗಳನ್ನೂ ತೊರೆದು ಅರಣ್ಯದತ್ತ ಮುಖಮಾಡಿದ ಸಿದ್ಧಾರ್ಥ, ಬುದ್ಧನಾಗಲು ಮಾಡಿದ ತ್ಯಾಗ ಅವರ್ಣನೀಯ.

ಸ್ವತಃ ತಾನೇ ಚಕ್ರವರ್ತಿಯಾಗಿ ಇಡೀ ಭರತಖಂಡವನ್ನೇ ಆಳುವ ಸಾಮರ್ಥ್ಯವಿದ್ದರೂ ಶ್ರೀಕೃಷ್ಣ ಚಕ್ರವರ್ತಿಯಾಗುವುದಿರಲಿ ಅರ್ಜುನನಿಗೇ ಸಾರಥಿಯಾದ.

ಮಂಗಳವಾಡದಿಂದ ಕಲ್ಯಾಣಕ್ಕೆ ಬಸವಣ್ಣನ ತುಂಬು ಕುಟುಂಬ-ಮಡದಿಯರು, ಅಕ್ಕ, ಅಳಿಯ ಮತ್ತು ತನ್ನೆಲ್ಲಾ ಅಗತ್ಯವಸ್ತುಗಳು ಕೇವಲ ಒಂದು ಎತ್ತಿನ ಬಂಡಿಯಲ್ಲಿ ಸಾಗಿಸುವಷ್ಟು, ಹರಳಯ್ಯ, ಮಧುವರಸರ ಮಕ್ಕಳ ಮದುವೆಯನ್ನು ಹಿಂದಕ್ಕೆ ಪಡೆದಿದ್ದಲ್ಲಿ ಇಡೀ ಜೀವಮಾನ ಪ್ರಧಾನಿಯಾಗಿರುತ್ತಿದ್ದ. ಬಸವಣ್ಣ ಎಲ್ಲವನ್ನೂ ತ್ಯಾಗ ಮಾಡಿದ ತತ್ತ್ವಕ್ಕಾಗಿ. ಭಾರತೀಯರ ಇಂತಹ ಉದಾಹರಣೆಗಳನ್ನು ಸಾವಿರ-ಸಾವಿರ ಸಂಖ್ಯೆಯಲ್ಲಿ ಕೊಡಬಹುದಾಗಿದೆ. ಇಂತಹ ಮಹನೀಯರಿಂದಲ್ಲವೇ ಭಾರತಕ್ಕೆ 'ಪುಣ್ಯಭೂಮಿ' ಎಂಬ ಬಿರುದು ಬಂದದ್ದು.

ಇದೆಲ್ಲಾ ಪುರಾಣದ ಇತಿಹಾಸದ ಮಾತಾಯಿತು. ಇನ್ನು ನಮ್ಮ ಕಾಲದ ಸಮೀಪಕ್ಕಿರುವ ಒಂದೆರಡು ಪ್ರಸಂಗಗಳನ್ನು ಗಮನಿಸೋಣ. ಬ್ಯಾರಿಸ್ಟರ್ ಪದವಿ ಪಡೆದು, ಪ್ರಸಿದ್ಧ ವಕೀಲರಾಗಿ ಸಾಕಷ್ಟು ಸಂಪಾದಿಸಿ ಸುಖವಾಗಿರಬಹುದಾದ ಜೀವನವನ್ನು ತೊರೆದು ಆಶ್ರಮದ ಕಡುಕಷ್ಟದ ಬದುಕಿಗೊಡ್ಡಿಕೊಂಡಿದ ಮಹಾತ್ಮಾಗಾಂಧೀಜಿ, ಐ.ಸಿ.ಎಸ್. ಪರೀಕ್ಷೆಯನ್ನು ಪ್ರಥಮದರ್ಜೆಯಲ್ಲಿ ಉತ್ತೀರ್ಣನಾಗಿ, ಉನ್ನತ ಹುದ್ದೆಯನ್ನಲಂಕರಿಸಿ ಸುಖ-ಭೋಗಗಳಲ್ಲಿ ಮುಳುಗೇಳಬಹುದಾಗಿದ್ದ ಅವಕಾಶವನ್ನು ತ್ಯಾಗ ಮಾಡಿ ರಾಷ್ಟ್ರೀಯ ಹೋರಾಟಕ್ಕೆ ಧುಮುಕಿದ ಸುಭಾಷ್ ಚಂದ್ರ ಬೋಸ್, ಪ್ರಧಾನಮಂತ್ರಿಯಾಗಿದ್ದೂ, ಸ್ವಂತ ಮನೆಯಿರದ ಲಾಲ್ ಬಹದ್ದೂರ್‌ಶಾಸ್ತ್ರಿ, ಅನೇಕ ವರ್ಷಗಳ ಕಾಲ ರಾಜ್ಯದ ಮುಖ್ಯಮಂತ್ರಿಯಾಗಿದ್ದೂ, ಬೆಂಗಳೂರಿನಂತಹ ನಗರದಲ್ಲಿ ೩೦X೪೦ ನಿವೇಶನವನ್ನೂ ಸಹ ಹೊಂದಿರದಿದ್ದ ರಾಷ್ಟ್ರೀಯ ನಾಯಕ ಎಸ್. ನಿಜಲಿಂಗಪ್ಪ, ಸಿದ್ಧಗಂಗೆಯ ಶಿವಕುಮಾರ ಮಹಾಶಿವಯೋಗಿಗಳು-ಇವರೆಲ್ಲರನ್ನೂ ಜನತೆ ಇಂದಿಗೂ ತಮ್ಮ ಮನದಾಳದಿಂದ ಗೌರವಿಸುತ್ತಿದ್ದಾರೆ, ಸ್ತುತಿಸುತ್ತಿದ್ದಾರೆ.

* 8ನೇ ಅಡ್ಡರಸ್ತೆ, 1ನೇ ಮೈನ್, ಶ್ರೀನಗರ, ದೇವರಾಯಪಟ್ಟಣ ಅಂಚೆ, ತುಮಕೂರು-572 104.

ಇಂಥಹವರು ಜಗತ್ತಿನ ಸರ್ವಶ್ರೇಷ್ಠ ಸಂಸ್ಕೃತಿಯೊಂದರಲ್ಲಿರ ಬಹುದಾದ ಕಳೆಯನ್ನು ಕೀಳುತ್ತಾ, ಕೊಳೆಯನ್ನು ತೊಳೆಯುತ್ತಾ, ಕಳೆಗಟ್ಟುವಂತೆ ಮಾಡುತ್ತಾ ಬಂದಿರುತ್ತಾರೆ. ಹಾಗಾದರೆ ನಮ್ಮ ಸಂಸ್ಕೃತಿಯ ಮುಖ್ಯ ಲಕ್ಷಣಗಳೇನು ?

*'ಪರೋಪಕಾರಾರ್ಥಮಿದಂ ಶರೀರಮ್'*

*'ಸಂತೋಷಮ್ ಜನಮೇತ್ ಪ್ರಾಜ್ಞಃ ತದೇವ ಈಶ್ವರ ಪೂಜನಮ್''*

*'ಪರೋಪಕಾರಾಯ ಪುಣ್ಯಾನಾಂ, ಪಾಪಾಯ ಪರಪೀಡನಮ್'*

ಹೀಗೆ ಪರೋಪಕಾರ, ದಾನ, ಧರ್ಮ, ಗುರು ಹಿರಿಯರಲ್ಲಿ ಭಕ್ತಿ, ಗೌರವ ಮಹಿಳೆಯರ-ಮಕ್ಕಳ ಬಗ್ಗೆ ಸಹಾನುಭೂತಿ, ಕಿರಿಯರಲ್ಲಿ ಪ್ರೀತಿ, ವಿಕಲಚೇತನರಲ್ಲಿ ಅನುಕಂಪ ಮುಂತಾದ ಸದ್ಗುಣಗಳಿಂದ ಇಡೀ ದೇಶ ತುಂಬಿತ್ತು. ಕೌಟುಂಬಿಕವಾಗಿ, ಅನ್ಯೋನ್ಯ ಭಾವನೆಗಳು ಜಾತಿ-ಜಾತಿಗಳ ಮಧ್ಯೆ ಸಾಮರಸ್ಯ ಎದ್ದು ಕಾಣುತ್ತಿದ್ದವು. ಇಡೀ ಗ್ರಾಮವೇ ಒಂದು ಅವಿಭಕ್ತ ಕುಟುಂಬದಂತೆ ಇರುತ್ತಿತ್ತು. ಯಾವುದೇ ಒಂದು ಕುಟುಂಬದ ಹೆಣ್ಣು ಇಲ್ಲವೇ ಗಂಡಿನ ಮದುವೆಯನ್ನು ಗೊತ್ತುಪಡಿಸಲು ಆ ಗ್ರಾಮದ ಎಲ್ಲಾ ಜಾತಿಯ ಹಿರಿಯರು ಸೇರಿ ಒಪ್ಪಿಗೆ ಕೊಡಬೇಕಾಗಿತ್ತು. ಬೇರೆ, ಬೇರೆ ಕೋಮಿನ ಜನರು ಪರಸ್ಪರ ಮಾವ, ಚಿಕ್ಕಪ್ಪ, ದೊಡ್ಡಪ್ಪ, ಅಣ್ಣ ಮುಂತಾಗಿ ಪ್ರೀತಿಯಿಂದ ಸಂಬೋಧಿಸುತ್ತಿದ್ದನ್ನು ಬಾಲ್ಯದ ದಿನಗಳಲ್ಲಿ ನಾನೇ ಖುದ್ದಾಗಿ ಕಂಡಿದ್ದೇನೆ. ಗ್ರಾಮದ ಯಾರೊಬ್ಬರ ಮನೆಯಲ್ಲಿ ಮದುವೆ ನಡೆಯುವುದಿದ್ದರೆ ಊರೊಟ್ಟಿನ ಜನರೆಲ್ಲಾ ಸೇರುತ್ತಿದ್ದರು. ಅಕ್ಕಿ ಆರಿಸುವುದು, ರಾಗಿಹಿಟ್ಟು ಮಾಡುವುದು ಮುಂತಾದುವುಗಳನ್ನು ಸಾಮೂಹಿಕವಾಗಿ ಕುಟ್ಟಿ, ಬೀಸಿ ಸಿದ್ಧಪಡಿಸುತ್ತಿದ್ದರು. ಹಪ್ಪಳ -ಸಂಡಿಗೆ ಮಾಡುವಾಗ ಹಾಡು-ಸಂಗೀತಗಳ ಜೊತೆಗೆ, ಹೂ, ಅರಿಷಿನ, ಕುಂಕುಮ ಮುಂತಾದ ಮಂಗಳ ದ್ರವ್ಯ ಗಳನ್ನು ಹಂಚುವುದು, ಹೀಗೆ ಕಾಯಕದ ಜೊತೆ ಜೊತೆಯಲ್ಲಿ ಸಂಸ್ಕೃತಿಯೂ ತನ್ನ ಕಂಪನ್ನು ಸೂಸುತ್ತಿತ್ತು. ಮದುವೆ-ಮುಂಜಿಗಳಲ್ಲಿ ಸೌದೆ ಹೊಡೆಯುವುದು, ಹಸಿರು ಚಪ್ಪರ ಹಾಕುವುದು, ಬಾವಿಯಿಂದ ನೀರು ಸೇದುವುದು, ಅಡುಗೆ ಮಾಡುವುದು, ಬಡಿಸುವುದು ಮುಂತಾಗಿ ಸಮಸ್ತ ಕೆಲಸ ಕಾರ್ಯಗಳನ್ನು ಮುಫತ್ತಾಗಿ ಅತ್ಯಂತ ಮುತುವರ್ಜಿಯಿಂದ ನಡೆಸುತ್ತಿದ್ದರು. ಇನ್ನು ಅಂತಹ ಸಾಮರಸ್ಯದ ದಿನಗಳನ್ನು ಭಾರತೀಯರ ಬದುಕಿನಲ್ಲಿ ಕಾಣಲು ಸಾಧ್ಯವೇ? ಬಡ ಕುಟುಂಬಗಳಲ್ಲಿ ಮದುವೆಗಳು ನಡೆಯುವುದಿದ್ದರೆ, ದವಸ, ಧಾನ್ಯ, ಬಟ್ಟೆ, ಸೀರೆ ಮಾಂಗಲ್ಯ ಮುಂತಾದುವುಗಳನ್ನು ನೀಡುತ್ತಿದ್ದರು. ಗ್ರಾಮಗಳಲ್ಲಿ ಹಲವು ಜಾತಿಗಳ ಒಂದು ಇಲ್ಲಾ ಎರಡೋ ಕುಟುಂಬಗಳಿದ್ದರೂ ಉಳಿದ ಎಲ್ಲರೂ ಅವರನ್ನು ಪ್ರೀತಿ ಗೌರವದಿಂದ ಕಾಣುತ್ತಿದ್ದರು. ಜಾತಿಗಳಿದ್ದವು ಆದರೆ ಜಾತೀಯತೆಯಿರಲಿಲ್ಲ.

ಗ್ರಾಮಗಳಲ್ಲಿ ಜಗಳ ವೈಮನಸ್ಸುಗಳಾದಲ್ಲಿ ಗ್ರಾಮಸಭೆ ಸೇರಿ ಮುಖಂಡರು ತೀರ್ಮಾನ ಕೊಟ್ಟರೆ ಉಭಯ ಬಣಗಳೂ ಅದನ್ನು ಚಾಚೂ ತಪ್ಪದೆ ಗೌರವಿಸಿ ಪಾಲಿಸುತ್ತಿದ್ದರು. ಇಂದಿನಂತೆ ವರ್ಷಗಟ್ಟಲೆ ನ್ಯಾಯಾಲಯ ಗಳ ಮೆಟ್ಟಿಲುಗಳನ್ನು ತುಳಿಯುತ್ತ, ಲಕ್ಷ, ಲಕ್ಷ ರೂಪಾಯಿ ಗಳನ್ನು ವಕೀಲರಿಗೆ ಸುರಿಯುವ ಸಂದರ್ಭವೇ ಬರುತ್ತಿರಲಿಲ್ಲ.

ಗ್ರಾಮಾಂತರ ಪ್ರದೇಶಗಳಲ್ಲಿ ಮದ್ಯಪಾನ, ಧೂಮಪಾನ, ಅತಿವಿರಳವಾಗಿತ್ತು. ಮದ್ಯಪಾನ ಮಾಡಿಬಂದಲ್ಲಿ ಸದ್ದಿಲ್ಲದೆ ಮನೆ ಸೇರಿ ಬಿಡುತ್ತಿದ್ದರು. ನಿಶೆ ಇಳಿಯುವವರೆಗೆ ಹೊರಗೆ ಬರುತ್ತಿರಲಿಲ್ಲ.

ಆದರೆ ಈಗ?

ಕೌಟುಂಬಿಕ ಜೀವನವಂತೂ ಅತ್ಯಂತ ಶಿಸ್ತುಬದ್ದವೂ, ಸುಮಧುರವೂ ಆಗಿದ್ದಿತ್ತು. ಪರಸ್ಪರ ಪ್ರೀತಿಯಿಂದ, ಅತ್ತೆ, ಮಾವ, ಅತ್ತಿಗೆ, ನಾದಿನಿ, ಭಾವ, ಅಣ್ಣಯ್ಯ, ತಮ್ಮಯ್ಯ, ತಾಯಿ, ಅಪ್ಪ, ಅಮ್ಮ, ಅಪ್ಪಯ್ಯ, ದೊಡ್ಡಪ್ಪ, ಚಿಕ್ಕಪ್ಪ ಹೀಗೆ ಹತ್ತು ಹಲವು ರೀತಿಯಲ್ಲಿ ಪ್ರೀತಿ-ಭಕ್ತಿಯಿಂದ ಸಂಬೋಧಿಸುತ್ತಿದ್ದರು. ಅಜ್ಜಿ-ತಾತಂದಿರಂತೂ ಎಲ್ಲರ ಬಗ್ಗೆಯೂ ಪ್ರೀತಿ, ಮಮತೆ ತೋರುತ್ತಿದ್ದರು. ಅಂತಹ ಕುಟುಂಬದಲ್ಲಿಯೂ ಯಾರಾದರೊಬ್ಬ ಬೇಜವಾಬ್ದಾರಿಯಿಂದ ನಡೆದುಕೊಳ್ಳುತ್ತಿದ್ದುದೂ ಉಂಟು. ಅಂತಹ ವ್ಯಕ್ತಿಯನ್ನು ತೀವ್ರವಾಗಿ ಆಕ್ಷೇಪಿಸಿ, ಕುಟುಂಬದಿಂದ ಹೊರಹಾಕುತ್ತಿರಲಿಲ್ಲ. ಆತನ ಹೆಂಡತಿ ಮಕ್ಕಳನ್ನು ತುಚ್ಛವಾಗಿ ಕಾಣುತ್ತಿರಲಿಲ್ಲ. ಹಾಗೆಯೇ ಅಸಹಾಯಕರು, ರೋಗಿಗಳು ಮತ್ತು ಮುಪ್ಪಡರಿದವರನ್ನು ಪ್ರೀತಿಯಿಂದ ಆರೈಕೆ ಮಾಡುತ್ತಿದ್ದರು. ಎಷ್ಟೋ ಕುಟುಂಬಗಳಲ್ಲಿ ನಾಲ್ಕಾರು ವರ್ಷಗಳ ಕಾಲ ಎಲ್ಲಾ ರೀತಿಯ ಸೇವೋಪಚಾರಗಳನ್ನು ಮಲಗಿದ್ದಲ್ಲಿಯೇ ಮಾಡಬೇಕಾಗುತ್ತಿತ್ತು.





ಅಂತಹ ಸಂದರ್ಭದಲ್ಲಿಯೂ ಸಹ ಸ್ವಲ್ಪವೂ ಬೇಸರಿಸಿಕೊಳ್ಳದೇ ಅದನ್ನು ವ್ರತವೆಂಬಂತೆ ಸ್ವೀಕರಿಸುತ್ತಿದ್ದರು.

ಆದರೆ ನಾವಿಂದು ಎತ್ತ ಕಡೆ ಹೊರಟಿದ್ದೇವೆ? ಸ್ವಾತಂತ್ರ್ಯಾನಂತರ ಸ್ವಾರ್ಥ ಮೆಲ್ಲಗೆ ತಲೆಹಾಕತೊಡಗಿತು. ನಂತರದ ದಿನಗಳಲ್ಲಿ ಸ್ವೇಚ್ಛಾಚಾರ-ಸ್ವೈರಾಚಾರಣೆಗಳು ನಗ್ನನರ್ತನ ಪ್ರಾರಂಭಿಸಿದವು. ಪ್ರಾರಂಭದಲ್ಲಿ ಎಲ್ಲರೂ ಅವರವರ ಮನೆಗಳನ್ನು ಮುರಿದುಕೊಂಡೆವು. ಅವಿಭಕ್ತ ಕುಟುಂಬಗಳನ್ನು ಹೊಡೆದು ಛಿದ್ರಗೊಳಿಸಿ ಭಾವನಾತ್ಮಕವಾಗಿ ಪರಸ್ಪರ ದೂರವಾದೆವು. ದೈವಕ್ಕೆ ಸಮಾನರಾದ ಮಾತಾಪಿತೃಗಳನ್ನು ಇಂದು ವೃದ್ಧಾಶ್ರಮಗಳಿಗೆ ಅಟ್ಟುತ್ತಿದ್ದೇವೆ. ಯಾರ ತ್ಯಾಗದ ಫಲವಾಗಿ ಸಮಾಜದಲ್ಲಿ ಮುಂದೆ ಬಂದ ನಾವು ಅವರನ್ನೇ ತುಚ್ಛೀಕರಿಸಿದ್ದೇವೆ. ಪ್ರಗತಿಯೆಂದರೆ ಇದೆಯೇನು? ಅದೇ ತಂದೆ-ತಾಯಿಗಳಿಗೆ ಹುಟ್ಟಿದ ಅಣ್ಣ-ತಮ್ಮಂದಿರು ಇಂದು ಪರಸ್ಪರ ಪರಿಚಯವಿಲ್ಲದವರಂತೆ ಬದುಕುತ್ತಿದ್ದೇವೆ. ಅವರಲ್ಲೂ ಯಾರಾದರೊಬ್ಬ ಶ್ರೀಮಂತನಾದ ಪಕ್ಷದಲ್ಲಿ ಉಳಿದವರನ್ನು-ಒಡಹುಟ್ಟಿದ ಅಕ್ಕ ತಂಗಿಯರನ್ನೂ ಸಹ ಕಣ್ಣೆತ್ತಿಯೂ ನೋಡುವುದಿಲ್ಲ. ಇನ್ನು ಪ್ರೀತಿ, ಗೌರವ, ಆದರಾತಿಥ್ಯಗಳಂತಹ ಪದಗಳು ಕಾಡುಸೇರಿ ಎಷ್ಟೋ ವರ್ಷಗಳಾಗಿವೆ. ದಾನ-ಧರ್ಮಗಳು ದೂರವೇ ಉಳಿಯಿತು. ಅದರಲ್ಲಿಯೂ ಅಕ್ಷರಸ್ಥ ಮಧ್ಯಮ ವರ್ಗವಂತೂ ಅದೇಕೋ ಏನೋ ತೀರಾ ಸಂಕುಚಿತರಾಗುತ್ತಿದ್ದಾರೆ. ಕನಿಷ್ಠ ಬೇರೆಯವರಿಗೆ ನೆರವು ನೀಡುವುದಿರಲಿ, ತಮ್ಮ ಕುಟುಂಬಕ್ಕೆ ಎರಡನೇ ಮಗುವೂ ಸಹ ಬೇಡವೆಂಬುವಷ್ಟು ಸಂಕುಚಿತರಾಗುತ್ತಿದ್ದಾರೆ. ಸ್ವಾರ್ಥ-ಲಾಲಸೆಗಳೇ ಲಾಸ್ಯವಾಡುತ್ತಿವೆ. ಇದಕ್ಕೆ ಇಂಬುಗೊಟ್ಟಂತೆ ಮದುವೆ ಮುಂತಾದ ಸಂದರ್ಭಗಳಲ್ಲಿ ಅರ್ಧ ತಿಂದು-ಇನ್ನರ್ಧ ಎಲೆಯ ಮೇಲೆ ಬಿಡುವುದು, ಹೀಗೆ ಮಾಡುವುದರಿಂದ ಅವರ ಗೌರವ ಹೆಚ್ಚುವುದಂತೆ! ಇಂತಹ ಜೀವನವನ್ನು ಆರಿಸಿಕೊಂಡ ಈ ಮಧ್ಯಮವರ್ಗ ಅವರಾದರೂ ನೆಮ್ಮದಿ ಯಿಂದಿದ್ದಾರೆಯೇ?

ತಮ್ಮ ಮಕ್ಕಳನ್ನು ಐಷಾರಾಮಿ ಭೋಗ ಜೀವನಕ್ಕೆ ತನಗರಿವಿಲ್ಲದೆಯೇ ದೂಡುತ್ತಿದ್ದಾರೆ. ಕೆಲವರು ಅಡ್ಡದಾರಿಯಿಂದ ಮಾಡಿದ ಅಪರಿಮಿತ ಸಂಪತ್ತು ಹೀಗೆ ಒಂದೆಡೆ ಕ್ರೋಢೀಕೃತವಾಗುವುದರಿಂದ ಅವರಿಗೂ ಒಳ್ಳೆಯದಾಗದೆ, ಸಮಾಜಕ್ಕೂ ಅದರ ಲಾಭ ದೊರೆಯದೆ ದೇಶ ವಿನಾಶದಂಚಿಗೆ ತಳ್ಳಲ್ಪಡುತ್ತಿದೆ. ಇಂದು ಎಲ್ಲೆಲ್ಲೂ ವ್ಯಾಪಾರೀಕರಣ, ಬಹುತೇಕ ಶಿಕ್ಷಕರು ಮನಬಿಚ್ಚಿ ಮಕ್ಕಳಿಗೆ ಬೋಧಿಸುತ್ತಿರುವುದು ಕಾಣದು. ಕೂಲಿಕಾರ, ರೈತ, ಕಾರ್ಮಿಕ ಯಾರೊಬ್ಬರೂ ತಮ್ಮ ಕ್ಷೇತ್ರದಲ್ಲಿ ಶ್ರದ್ಧೆ, ಪ್ರೀತಿಯನ್ನು ಉಳಿಸಿಕೊಂಡಿಲ್ಲ. ವೈದ್ಯ-ವಕೀಲ, ವ್ಯಾಪಾರಿ ಎಲ್ಲರೂ ವ್ಯಾಪಾರ ಮನೋಭಾವದವರೇ ಆಗಿದ್ದಾರೆ. ಇನ್ನು ರಾಜಕೀಯ ಕೈಗಾರಿಕಾ ಕ್ಷೇತ್ರದ ಧುರೀಣರ ಬಗ್ಗೆ ಹೇಳದಿರುವುದೇ ಲೇಸು. ಇಂದು ಎಲ್ಲೆಲ್ಲೂ ಎಲ್ಲರೂ ಕ್ಷೋಭೆಗೆ ಒಳಗಾಗಿರುವುದನ್ನು ಕಾಣುತ್ತೇವೆ.

ಹಾಗಾದರೆ ಸುಂದರ ಬದುಕಿಗೆ ದಾರಿ ಯಾವುದು? ಮರಳು-ಮರಳು ಇತಿಹಾಸಕ್ಕೆ, ಪುರಾಣಕ್ಕೆ-ಅಂದರೆ ಶರಣ ಮಾರ್ಗ, ಗಾಂಧಿಮಾರ್ಗಕ್ಕೆ ಅದೇನದು? ದೇಹವನ್ನು, ಮನಸ್ಸನ್ನು ದಂಡಿಸುತ್ತ ದುಡಿಯುವುದು, ಪ್ರಕೃತಿಯನ್ನು ಗೌರವಿಸಿ, ಅದಕ್ಕೆ ಅಪಚಾರವೆಸಗದೆ, ಹಾನಿ ಮಾಡದೆ, ಅದರ ಫಲವನ್ನು ಸರ್ವರೂ ಸಮಾನರಾಗಿ ಹಂಚುಣ್ಣುವುದು. ನಾಯಿ ಸಂಸ್ಕೃತಿಗೆ ಮಾರು ಹೋಗದೆ ಗೋವು ಸಂಸ್ಕೃತಿಯನ್ನು ಪುನರುಜ್ಜೀವನಗೊಳಿಸುವುದು, ನಮಗಿರುವಂತೆಯೇ ಇತರರಿಗೂ ಹಕ್ಕು-ಆಸೆ-ಭಾವನೆಗಳಿರುತ್ತವೆಯೆಂಬ ಸಾಮಾನ್ಯ ಅರಿವನ್ನು ಪಡೆಯುವುದು. ಭೂಮಿ, ನೀರು, ಅರಣ್ಯ, ಸಸ್ಯಗಳ ಬಗ್ಗೆ ನಮ್ಮ ಪೂರ್ವಜರು ಹೊಂದಿದ್ದ ಗೌರವ ಭಾವನೆಗಳನ್ನು ಮರುಸ್ಥಾಪಿಸುವುದು. ಈ ಪ್ರಕೃತಿಯನ್ನು ವಿನಾಶಗೊಳಿಸುವುದು ಭಗವಂತನಿಗೆ ಮಾಡುವ ಅಪಚಾರ-ದ್ರೋಹ ಎಂದು ತಿಳಿಯುವುದು. 'ಮಾನವನ ಅಪ್ರಮಾಣಿಕ ಬದುಕು ಪ್ರಾಣಿಗಳ ಹಾಗೂ ಸಸ್ಯಗಳ ಪ್ರಾಮಾಣಿಕತೆಯ ಮೇಲೆ ನಿಂತಿದೆ!'

ಹೂವನ್ನು ಗಿಡದಿಂದ ಕಿತ್ತರೆ ಒಂದೆರೆಡು ಗಂಟೆಗಳಲ್ಲಿ ಬಾಡಿಹೋಗುತ್ತವೆ. ಅದೇ ಗಿಡದಲ್ಲಿಯೇ ಬಿಟ್ಟರೆ ನಾಲ್ಕಾರು ದಿನ ಸುಂದರ-ಸುವಾಸನೆಯನ್ನು ಬೀರುತ್ತವೆ. ಗಿಡದಲ್ಲಿಯೇ ಬಿಡುವುದರಿಂದ ಸದಾ ಅವುಗಳ ಸೌಂದರ್ಯವನ್ನು ಆಸ್ವಾದಿಸಬಹುದು. ಇಲ್ಲವೆ ಕಿತ್ತು ಕಮರಿ ಹೋಗಲು ಕಾರಣರಾಗಬಹುದು. ಆಯ್ಕೆ ನಿಮ್ಮದು. ಏಸುಕ್ರಿಸ್ತನ ವಾಣಿ 'What is profiting by gaining the whole world and loseth your own soul?'- ನಮ್ಮನ್ನು ಎಚ್ಚರಿಸಬಹುದೆ?

❖

# ಹಳೆಯ ವಿದ್ಯಾರ್ಥಿಗಳ ಹಾಗೂ ಹಿತೈಷಿ ಸಂಘದ 57ನೇ ವಾರ್ಷಿಕ ಅಧಿವೇಶನ



ವಾರ್ಷಿಕ ಅಧಿವೇಶನದ ದಿವ್ಯಸಾನ್ನಿಧ್ಯ ವಹಿಸಿ ಪ್ರಸಾದವಾಣಿಯನ್ನು ದಯಪಾಲಿಸುತ್ತಿರುವ ಪರಮಪೂಜ್ಯ ಶ್ರೀಗಳವರು

'ಪ್ರತಿವರ್ಷ ನಡೆಯುವ ಈ ಸಮಾರಂಭ ಹಳೆಯ ವಿದ್ಯಾರ್ಥಿಗಳು ಶ್ರೀಮಠದಿಂದ ಪಡೆದ ಕಿಂಚಿತ್ ಉಪಕಾರವನ್ನು ಸ್ಮರಿಸಿ ಕೃತಜ್ಞತೆಯನ್ನು ಸಲ್ಲಿಸುವ ಸಂದರ್ಭ. ಎಲ್ಲರೂ ನೀವು ಮಾಡುವ ಸ್ಥಾನದಲ್ಲಿ ಪ್ರಾಮಾಣಿಕತೆಯಿಂದ ಸೇವೆ ಮಾಡಬೇಕು. ಆಗ ಜೀವನ ಸಾರ್ಥಕವಾಗುತ್ತದೆ. ನೀವು ಮಾಡುವ ಯಾವುದೇ ಸೇವೆ ಶ್ರೇಷ್ಠವಾದುದು. ನೀವೆಲ್ಲ ಸೇವಾಶೀಲರಾಗಿರುವುದು ನಮಗೆ ಸಂತೋಷವನ್ನುಂಟು ಮಾಡಿದೆ. ಮಾನವೀಯ ಮೌಲ್ಯಗಳನ್ನು ಬೆಳೆಸಿಕೊಳ್ಳಬೇಕು' ಎಂದು ಪರಮಪೂಜ್ಯ ಡಾ॥ ಶ್ರೀ ಶ್ರೀ ಶಿವಕುಮಾರಮಹಾಸ್ವಾಮಿಗಳವರು ಡಿಸೆಂಬರ್ ೧೮ರಂದು ಶ್ರೀಮಠದಲ್ಲಿ ಏರ್ಪಡಿಸಿದ್ದ ಹಳೆಯ ವಿದ್ಯಾರ್ಥಿಗಳ ಹಾಗೂ ಹಿತೈಷಿ ಸಂಘದ ೫೭ನೇ ವಾರ್ಷಿಕ ಅಧಿವೇಶನದ ದಿವ್ಯಸಾನ್ನಿಧ್ಯ ವಹಿಸಿ ಮಾತನಾಡಿದರು.

ಪೂಜ್ಯ ಶ್ರೀಗಳವರು ತಮ್ಮ ನುಡಿಬೆಳಕಿನಲ್ಲಿ "ನಿಜವಾದ ಸೇವೆ ಮಾಡಿದಾಗ ದೇಶದ ಅಭಿವೃದ್ಧಿಯಾಗುತ್ತದೆ. ಭ್ರಷ್ಟಾಚಾರದಿಂದ ದೂರವಿರಬೇಕು. ನಾವು ಮಾಡುವ ಕೆಲಸದಲ್ಲಿ ಶ್ರದ್ಧೆ, ದಕ್ಷತೆ, ಪ್ರಾಮಾಣಿಕತೆ ಬೇಕು. ನಾವು ಮೊದಲಿನಿಂದಲೂ ಜಾತೀಯ ಭಾವನೆಯನ್ನು ಇಟ್ಟುಕೊಂಡಿಲ್ಲ. ಎಲ್ಲಾ ಜಾತಿಯವರಿಗೂ ಶ್ರೀಮಠದಲ್ಲಿ ಆಶ್ರಯ ನೀಡಿ ಅವರ ಭವಿಷ್ಯ ರೂಪಿಸಿಕೊಳ್ಳುವಂತೆ ಮಾಡಲು ಪ್ರಾಮಾಣಿಕ ಪ್ರಯತ್ನ ಮಾಡುತ್ತಿದ್ದೇವೆ. ಜೀವನ ಸರಳವಾಗಿರಲಿ, ಆದರ್ಶ ಮೌಲ್ಯಗಳನ್ನು ಜೀವನದಲ್ಲಿ ಅಳವಡಿಸಿಕೊಂಡು ಉತ್ತಮ ನಾಗರಿಕರಾಗಿ ಬಾಳಿ. ಮೊದಲು ನಿಮ್ಮ ಕುಟುಂಬ ಯೋಗಕ್ಷೇಮ ನಂತರ ದೇಶದ ಅಭಿವೃದ್ಧಿ ಇದೇ ನೀಡುವ ಕಾಣಿಕೆ' ಎಂದು ನುಡಿದರು.

## ಪ್ರಶಸ್ತಿ ಪ್ರದಾನ :

**'ಸಿದ್ಧಗಂಗಾ ಶಿವಕುಮಾರಶ್ರೀ'**

ಶ್ರೀಮತಿ ಶಕುಂತಲ ಜಯದೇವ್‌ಅವರು ಸ್ಥಾಪಿಸಿದ 'ಸಿದ್ಧಗಂಗಾ ಶಿವಕುಮಾರಶ್ರೀ' ಪ್ರಶಸ್ತಿಯನ್ನು ಈ ಬಾರಿ ಸಾಹಿತಿ ಶ್ರೀ ಟಿ.ಆರ್. ಮಹಾದೇವಯ್ಯ ಹಾಗೂ ಮಾಜಿ ಸಚಿವೆ ಶ್ರೀಮತಿ ಲೀಲಾದೇವಿ ಆರ್. ಪ್ರಸಾದ್ ಅವರಿಗೆ ಪ್ರದಾನ ಮಾಡಲಾಯಿತು. ಪರಮಪೂಜ್ಯ ಶ್ರೀಗಳು ಶಾಲು ಹೊದಿಸಿ ಫಲತಾಂಬೂಲ, ಸ್ಮರಣಿಕೆ ಹಾಗೂ ಹತ್ತು ಸಾವಿರ ರೂಗಳ ಚೆಕ್‌ಅನ್ನು ನೀಡಿ ಸನ್ಮಾನಿಸಿ ಆಶೀರ್ವದಿಸಿದರು. ಪ್ರಶಸ್ತಿ ವಿಜೇತರ ಪರಿಚಯವನ್ನು ಕ್ರಮವಾಗಿ ಶ್ರೀ ಎಸ್. ಮಲ್ಲಿಕಾರ್ಜುನಯ್ಯ ಶ್ರೀ ಎಂ.ಜಿ. ಸಿದ್ಧರಾಮಯ್ಯ ಮಾಡಿಕೊಟ್ಟರು.







ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗಮಹಾಸ್ವಾಮಿಗಳವರಿಂದ ಅಧಿವೇಶನದ ಉದ್ಘಾಟನೆ. ಈ ಸಂದರ್ಭದಲ್ಲಿ ಹರಗುರು ಚರಮೂರ್ತಿಗಳು, ಪ್ರಗತಿಪರ ರೈತರಾದ ಶ್ರೀ ಆರ್. ನಾರಾಯಣಸ್ವಾಮಿರೆಡ್ಡಿಯವರು



ಪರಮಪೂಜ್ಯ ಶ್ರೀ ಶ್ರೀ ಗಳವರಿಂದ ಶ್ರೀಮತಿ ಲೀಲಾದೇವಿ ಆರ್. ಪ್ರಸಾದ್ ಅವರಿಗೆ ಸಿದ್ಧಗಂಗಾಶಿವಕುಮಾರಶ್ರೀ ಪ್ರಶಸ್ತಿ ಪ್ರದಾನ



ಪರಮಪೂಜ್ಯ ಶ್ರೀ ಶ್ರೀ ಗಳವರಿಂದ ಶ್ರೀ ಟಿ.ಆರ್. ಮಹಾದೇವಯ್ಯನವರಿಗೆ ಸಿದ್ಧಗಂಗಾಶಿವಕುಮಾರಶ್ರೀ ಪ್ರಶಸ್ತಿ ಪ್ರದಾನ

**'ಸಂಘಸಿರಿ ಪ್ರಶಸ್ತಿ'**

ಕಳೆದ ವರ್ಷದಿಂದ ಪ್ರಾರಂಭಿಸಿದ 'ಸಂಘಸಿರಿ' ಪ್ರಶಸ್ತಿಯನ್ನು ಸಾಮಾಜಿಕ ಕಾರ್ಯಕರ್ತರಾದ ಆಡಿಟರ್ ಶ್ರೀ ಎಸ್. ಸಿದ್ಧಗಂಗಯ್ಯ ಹಾಗೂ ಶ್ರೀ ಸಾಸಲು ನಂಜುಂಡಪ್ಪನವರಿಗೆ, ಕಥಾ ಕೀರ್ತನಕಾರರಾದ ಶ್ರೀ ಎನ್.ಆರ್. ಜ್ಞಾನಮೂರ್ತಿ ಹಾಗೂ ಜಾನಪದ ಕಲಾವಿದರಾದ ಶ್ರೀ ಹೆಚ್.ಎಸ್. ನೀಲಕಂಠಯ್ಯನವರಿಗೆ ಪೂಜ್ಯಶ್ರೀಗಳು ಶಾಲು ಹೊದಿಸಿ ಫಲತಾಂಬೂಲ ಹಾಗೂ ಸ್ಮರಣಿಕೆಯನ್ನು ನೀಡಿ ಸನ್ಮಾನಿಸಿ ಆಶೀರ್ವದಿಸಿದರು. ಶ್ರೀ ಎಸ್. ಸಿದ್ಧಗಂಗಯ್ಯ ನವರು ಅನಾರೋಗ್ಯ ನಿಮಿತ್ತ ಗೈರು ಹಾಜರಾಗಿದ್ದರು. ಸನ್ಮಾನಿತರ ಪರಿಚಯವನ್ನು ಕ್ರಮವಾಗಿ ಶ್ರೀ ಹೆಚ್.ಬಿ. ಗಂಗಾಧರಯ್ಯ, ಶ್ರೀ ಶಂಕರಪ್ಪ ಶ್ರೀ ಪರಮೇಶ್ ಹಾಗೂ ಶ್ರೀ ರುದ್ರಾರಾಧ್ಯರು ಮಾಡಿಕೊಟ್ಟರು.

ಇದೇ ಸಂದರ್ಭದಲ್ಲಿ ರಾಷ್ಟ್ರಪ್ರಶಸ್ತಿ ವಿಜೇತೆ ಶಾಲಾ ಶಿಕ್ಷಕಿ ಶ್ರೀಮತಿ ಬಿ. ಶೈಲಜಾರವರನ್ನು ಹಾಗೂ 'ಸಿದ್ಧಗಂಗಾ ಶಿವಕುಮಾರಶ್ರೀ' ಪ್ರಶಸ್ತಿ ಪ್ರಾಯೋಜಕರಾದ ಶ್ರೀಮತಿ ಶಕುಂತಲಾ ಜಯದೇವ್ ಅವರನ್ನು ಪೂಜ್ಯ ಶ್ರೀಗಳು ಸನ್ಮಾನಿಸಿ ಆಶೀರ್ವದಿಸಿದರು.

ಮುಖ್ಯಅತಿಥಿಗಳಾಗಿದ್ದ ಪ್ರಗತಿಪರರೈತರಾದ ಶ್ರೀ ಆರ್. ನಾರಾಯಣಸ್ವಾಮಿರೆಡ್ಡಿಯವರ ಪರಿಚಯವನ್ನು ಶ್ರೀ ಎಸ್. ರೇಣುಕಾರಾಧ್ಯ ಅವರು ಮಾಡಿಕೊಟ್ಟರು. ಪರಮ ಪೂಜ್ಯ ಶ್ರೀಗಳು ಶ್ರೀರೆಡ್ಡಿಯವರಿಗೆ ಶಾಲು ಹೊದಿಸಿ, ಫಲ ತಾಂಬೂಲ ಹಾಗೂ ನೆನಪಿನ ಕಾಣಿಕೆಯನ್ನು ನೀಡಿ ಆಶೀರ್ವದಿಸಿದರು.

ಶ್ರೀ ಆರ್. ನಾರಾಯಣಸ್ವಾಮಿರೆಡ್ಡಿಯವರು ಮಾತನಾಡಿ "ನನಗೆ ದೊಡ್ಡಸ್ತಿಕೆ ಹೇಳಿಕೊಳ್ಳುವುದು ಇಷ್ಟವಿಲ್ಲ. ಬುದ್ಧಿಯವರಿಗೆ ಶ್ರೀಮಠಕ್ಕೆ ಇನ್ನೂ ಹೆಚ್ಚಿನ ಸಹಾಯ ಮಾಡಬೇಕೆನ್ನುವ ಮನಸ್ಸಿದೆ. ಪ್ರತಿನಿತ್ಯ ೧೦ ಸಾವಿರ ಮಕ್ಕಳಿಗೆ ಪ್ರಸಾದ ನೀಡಿ ಅವರಿಗೆ ವಿದ್ಯಾಭ್ಯಾಸ ನೀಡುವುದು ಸುಲಭದ ಕೆಲಸವಲ್ಲ. ನನ್ನಂಥವರು ಉದಾರ ಮನಸ್ಸಿನಿಂದ ನೆರವನ್ನು ನೀಡಿದರೆ ಮತ್ತಷ್ಟು ಮಕ್ಕಳಿಗೆ ಅವಕಾಶ ಕಲ್ಪಿಸಿಕೊಡಬಹುದು. ಇದಕ್ಕೆ ಪರಮಪೂಜ್ಯ ಶ್ರೀಗಳ ಆಶೀರ್ವಾದ ಬೇಕು. ನಾನು ಪೂಜ್ಯ ಶ್ರೀಗಳವರಲ್ಲಿ ಪರಶಿವನನ್ನು ಕಾಣು

ತ್ತಿದ್ದೇವೆ. ಆ ಶಿವ ನನಗೆ ಎಷ್ಟು ಕೊಡುತ್ತಾನೊ ಅದೆಲ್ಲವನ್ನು ಶ್ರೀಮಠಕ್ಕೆ ಕೊಡುತ್ತೇನೆ" ಎಂದು ಭಾವುಕರಾಗಿ ನುಡಿದರು.

ಅವರು ಇದೇ ಸಂದರ್ಭದಲ್ಲಿ ಪರಮಪೂಜ್ಯ ಶ್ರೀಗಳ ಹುಟ್ಟು ಹಬ್ಬದ ದಿನ ಶ್ರೀಮಠದ ಮಕ್ಕಳಿಗೆಲ್ಲ ಸಮವಸ್ತ್ರ ಧರಿಸಿಬೇಕೆಂಬ ಸದಾಶಯದಿಂದ ೧೯ ಲಕ್ಷ ರೂಗಳ ಚೆಕ್‌ಅನ್ನು ಪರಮಪೂಜ್ಯರಿಗೆ ಅರ್ಪಿಸಿದರು.

**ಕೃತಜ್ಞತಾನುಡಿ**

'ಸಿದ್ಧಗಂಗಾಶಿವಕುಮಾರಶ್ರೀ' ಪ್ರಶಸ್ತಿಯನ್ನು ಸ್ವೀಕರಿಸಿ ಮಾತನಾಡಿದ ಮಾಜಿ ಸಚಿವೆ ಶ್ರೀಮತಿ ಲೀಲಾದೇವಿ ಆರ್. ಪ್ರಸಾದ್ ಅವರು 'ನಿಜಕ್ಕೂ ನಾನು ಪುಣ್ಯವಂತಳು, ನಾನು ಅನೇಕ ಸನ್ಮಾನಗಳಿಗೆ ಪಾತ್ರಳಾಗಿದ್ದೇನೆ. ಆದರೆ ಇಂದು ಪೂಜ್ಯಶ್ರೀಗಳವರ ಶಿವಹಸ್ತದಿಂದ ಪಡೆದ ಸನ್ಮಾನ ತುಂಬಾ ಪವಿತ್ರವಾದುದು. ಪೂಜ್ಯ ಶ್ರೀಗಳ ಆಶೀರ್ವಾದ ನನ್ನ ಬದುಕಿಗೆ ಶ್ರೀರಕ್ಷೆಯಾಗಲಿ' ಎಂದು ಹೇಳಿ ತನಗೆ ನೀಡಿದ ೧೦ ಸಾವಿರ ರೂಗಳನ್ನು ಶ್ರೀಗಳವರ ಪಾದಕ್ಕೆ ಅರ್ಪಿಸಿದರು

ಶ್ರೀ ಟಿ.ಆರ್. ಮಹಾದೇವಯ್ಯನವರು ತಮ್ಮ ಕೃತಜ್ಞತಾ ನುಡಿಗಳಲ್ಲಿ 'ಹಳೆಯ ವಿದ್ಯಾರ್ಥಿಗಳ ಹಾಗೂ ಹಿತೈಷಿಗಳ ಸಂಘ ಮಾಡುತ್ತಿರುವ ಸಾಧನೆ ದೊಡ್ಡದು. ಶ್ರೀಮತಿ ಶಕುಂತಲ ಜಯದೇವ್ ಅವರ ಸೇವೆ ಅಮೂಲ್ಯವಾದುದು. ನಾನು ಸಿದ್ಧಗಂಗಾ ಸಂಸ್ಕೃತಿಯನ್ನು ಮೈಗೂಡಿಸಿಕೊಳ್ಳಲು ಪ್ರಾಮಾಣಿಕವಾಗಿ ಪ್ರಯತ್ನಿಸುತ್ತಿದ್ದೇನೆ' ಎಂದು ನುಡಿದ ಶ್ರೀ ಮಹದೇವಯ್ಯನವರು ಪಂಡಿತ ಚನ್ನಪ್ಪ ಎರೆಸೀಮೆ ಯವರ ಸಹಕಾರವನ್ನು ಕೃತಜ್ಞತೆಯಿಂದ ಸ್ಮರಿಸಿದರು.

ವೇದಿಕೆಯಲ್ಲಿ ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳು ಹಾಗೂ ವಿವಿಧ ಮಠಗಳ ಹರಗುರು ಚರಮೂರ್ತಿಗಳು ಉಪಸ್ಥಿತರಿದ್ದರು. ಕಾರ್ಯಕ್ರಮ ಶ್ರೀ ಎಸ್. ಮಲ್ಲಿಕಾರ್ಜುನಯ್ಯ ಅವರ ಪ್ರಾರ್ಥನೆಯಿಂದ ಆರಂಭ ವಾಯಿತು. ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗಸ್ವಾಮಿಗಳು ಅಧಿವೇಶನವನ್ನು ಉದ್ಘಾಟಿಸಿದರು. ಹಳೆಯ ವಿದ್ಯಾರ್ಥಿಗಳ ಹಾಗೂ ಹಿತೈಷಿ ಸಂಘದ ಪ್ರಧಾನ ಕಾರ್ಯದರ್ಶಿಗಳಾದ ಡಾ॥ ಎಂ.ಎನ್. ಚನ್ನಬಸಪ್ಪ ಅವರು ಸರ್ವರನ್ನು ಸ್ವಾಗತಿಸಿ ಪ್ರಾಸ್ತಾವಿಕ ನುಡಿಗಳ ನ್ನಾಡಿದರು. ಕಾರ್ಯದರ್ಶಿ ಶ್ರೀ ಕೆ.ಎಚ್. ಶಿವರುದ್ರಯ್ಯನವರು ಮಾರ್ಚ್ ತಿಂಗಳಿನಲ್ಲಿ



ಶ್ರೀ ಆರ್. ನಾರಾಯಣಸ್ವಾಮಿರೆಡ್ಡಿಯವರಿಗೆ ಆಶೀರ್ವಾದ



ಶ್ರೀ ಸಾಸಲು ನಂಜುಂಡಪ್ಪನವರಿಗೆ ಸಂಘಸಿರಿ ಪ್ರಶಸ್ತಿ ಪ್ರದಾನ



ಶ್ರೀ ಎನ್.ಆರ್. ಜ್ಞಾನಮೂರ್ತಿರವರಿಗೆ ಸಂಘಸಿರಿ ಪ್ರಶಸ್ತಿ ಪ್ರದಾನ



ಶ್ರೀ ಹೆಚ್.ಎಸ್. ನೀಲಕಂಠಯ್ಯನವರಿಗೆ ಸಂಘಸಿರಿ ಪ್ರಶಸ್ತಿ ಪ್ರದಾನ





ನಡೆಯಲಿರುವ ಪರಮಪೂಜ್ಯ ಶ್ರೀ ಶ್ರೀಗಳವರ ೮೧ನೇ ನಿರಂಜನ ಪಟ್ಟಾಧಿಕಾರ ಮಹೋತ್ಸವದಲ್ಲಿ ಲೋಕಾರ್ಪಣೆ ಯಾಗಲಿರುವ ಗ್ರಂಥಗಳು ಹಾಗೂ ಇತರೆ ಯೋಜನೆಗಳ ಬಗ್ಗೆ ವರದಿ ನೀಡಿದರು.

ಶ್ರೀ ಬಿ. ಗಂಗಾಧರಯ್ಯನವರು ಕೃಷಿ ಮತ್ತು ಕೈಗಾರಿಕಾ ವಸ್ತುಪ್ರದರ್ಶನದ ವಾರ್ಷಿಕ ಲೆಕ್ಕಪತ್ರಗಳ ವರದಿಯನ್ನು, ಶ್ರೀ ಹೆಚ್.ಬಿ. ಗಂಗಾಧರಯ್ಯ ನವರು ಸಿದ್ಧಗಂಗಾಮಾಸಪತ್ರಿಕೆ ಲೆಕ್ಕಪತ್ರ ವರದಿಯನ್ನು ಮಂಡಿಸಿ ಸಭೆಯ ಒಪ್ಪಿಗೆಯನ್ನು ಪಡೆದರು. ಇದೇ ಸಂದರ್ಭದಲ್ಲಿ ಸಂಘದ ಆಜೀವ ಸದಸ್ಯತ್ವದ ಶುಲ್ಕವನ್ನು ೨೦೦/- ರೂಗಳಿಂದ ೩೦೦/- ರೂಗಳಿಗೆ ಹೆಚ್ಚಿಸಲು ಸಭೆ ಅನುಮೋದನೆ ನೀಡಿತು.

ಪ್ರೊ. ಹೆಚ್.ವಿ. ವೀರಭದ್ರಯ್ಯನವರು ಪೂಜ್ಯ ಶ್ರೀಗಳವರ ೮೧ನೇ ವಿರಕ್ತಾಶ್ರಮ ಸಮಾರಂಭದ ಸಿದ್ಧತೆಯನ್ನು ಕುರಿತು ಮಾಹಿತಿ ನೀಡಿದರು. ಡಾ॥ ಸಿ. ಜಯಣ್ಣನವರು 'ಆರೋಗ್ಯ ದಾಸೋಹ' ಕಾರ್ಯಕ್ರಮದ ಬಗ್ಗೆ ವಿವರ ನೀಡಿದರು. ಹಳೆಯ ವಿದ್ಯಾರ್ಥಿ ಮುಳಬಾಗಿಲು ಶ್ರೀ ಎಸ್.ಸಿ. ಶಿವಕುಮಾರ ಅವರು ತಮ್ಮ ಅಭಿಪ್ರಾಯಗಳನ್ನು ಹಂಚಿಕೊಂಡರು. ಸಭೆಯ ಆರಂಭದಲ್ಲಿ ಕಳೆದ ವಾರ್ಷಿಕ ಅಧಿವೇಶನದಿಂದ ಈವರೆಗೆ ನಮ್ಮನ್ನಗಲಿದ ಗಣ್ಯರಿಗೆ ಒಂದು ನಿಮಿಷ ಮೌನ ಆಚರಿಸುವುದರ ಮೂಲಕ ಶ್ರದ್ಧಾಂಜಲಿಯನ್ನು ಅರ್ಪಿಸಲಾಯಿತು. ಕೊನೆಯಲ್ಲಿ ಶ್ರೀ ಪಿ.ಎನ್. ಚಂದ್ರಶೇಖರಯ್ಯ ನವರು ಶರಣು ಸಮರ್ಪಣೆ ಮಾಡಿದರು.

ವರದಿ: ಎಚ್.ಎಸ್. ಸಿದ್ಧಗಂಗಪ್ಪ



ಶ್ರೀಮತಿ ಶಕುಂತಲಾ ಜಯದೇವ್‌ರವರಿಗೆ ಸನ್ಮಾನ



ರಾಷ್ಟ್ರಪ್ರಶಸ್ತಿ ವಿಜೇತೆ ಶ್ರೀಮತಿ ಬಿ. ಶೈಲಜಾರವರಿಗೆ ಆಶೀರ್ವಾದ





RNI No. 17139/69 "Siddaganga" Monthly - Postal Reg. No. KA/SK/TMR/385/2009-11

# ದಿನದರ್ಶಿ 2012



## ಜನವರಿ 2012

| ಭಾ | ಸೋ | ಮಂ | ಬುಧ | ಗುರು | ಶುಕ್ರ | ಶನಿ |
|---|---|---|---|---|---|---|
| 1 | 2 | 3 | 4 | 5 | 6 | 7 |
| 8 | 9 | 10 | 11 | 12 | 13 | 14 |
| 15 | 16 | 17 | 18 | 19 | 20 | 21 |
| 22 | 23 | 24 | 25 | 26 | 27 | 28 |
| 29 | 30 | 31 | | | | |

## ಫೆಬ್ರವರಿ 2012

| ಭಾ | ಸೋ | ಮಂ | ಬುಧ | ಗುರು | ಶುಕ್ರ | ಶನಿ |
|---|---|---|---|---|---|---|
| | | | 1 | 2 | 3 | 4 |
| 5 | 6 | 7 | 8 | 9 | 10 | 11 |
| 12 | 13 | 14 | 15 | 16 | 17 | 18 |
| 19 | 20 | 21 | 22 | 23 | 24 | 25 |
| 26 | 27 | 28 | 29 | | | |

## ಮಾರ್ಚ್ 2012

| ಭಾ | ಸೋ | ಮಂ | ಬುಧ | ಗುರು | ಶುಕ್ರ | ಶನಿ |
|---|---|---|---|---|---|---|
| | | | | 1 | 2 | 3 |
| 4 | 5 | 6 | 7 | 8 | 9 | 10 |
| 11 | 12 | 13 | 14 | 15 | 16 | 17 |
| 18 | 19 | 20 | 21 | 22 | 23 | 24 |
| 25 | 26 | 27 | 28 | 29 | 30 | 31 |

## ಏಪ್ರಿಲ್ 2012

| ಭಾ | ಸೋ | ಮಂ | ಬುಧ | ಗುರು | ಶುಕ್ರ | ಶನಿ |
|---|---|---|---|---|---|---|
| 1 | 2 | 3 | 4 | 5 | 6 | 7 |
| 8 | 9 | 10 | 11 | 12 | 13 | 14 |
| 15 | 16 | 17 | 18 | 19 | 20 | 21 |
| 22 | 23 | 24 | 25 | 26 | 27 | 28 |
| 29 | 30 | | | | | |

## ಮೇ 2012

| ಭಾ | ಸೋ | ಮಂ | ಬುಧ | ಗುರು | ಶುಕ್ರ | ಶನಿ |
|---|---|---|---|---|---|---|
| | | 1 | 2 | 3 | 4 | 5 |
| 6 | 7 | 8 | 9 | 10 | 11 | 12 |
| 13 | 14 | 15 | 16 | 17 | 18 | 19 |
| 20 | 21 | 22 | 23 | 24 | 25 | 26 |
| 27 | 28 | 29 | 30 | 31 | | |

## 2012ನೇ ವರ್ಷದ ಸರ್ಕಾರಿ ರಜಾ ದಿನಗಳು

| ತಿಂಗಳು | ದಿನಾಂಕ | ವಾರ | ರಜೆ |
|---|---|---|---|
| ಜನವರಿ | 15 | ಭಾನು | ಉತ್ತರಾಯಣ ಪುಣ್ಯಕಾಲ |
| | 26 | ಗುರು | ಗಣರಾಜ್ಯೋತ್ಸವ |
| ಫೆಬ್ರವರಿ | 05 | ಭಾನು | ಈದ್ ಮಿಲಾದ್ |
| | 20 | ಸೋಮ | ಮಹಾಶಿವರಾತ್ರಿ |
| ಮಾರ್ಚ್ | 23 | ಶುಕ್ರ | ಚಾಂದ್ರಮಾನ ಯುಗಾದಿ |
| ಏಪ್ರಿಲ್ | 04 | ಬುಧ | ಮಹಾವೀರ ಜಯಂತಿ |
| | 06 | ಶುಕ್ರ | ಗುಡ್‌ಫ್ರೈಡೇ |
| | 14 | ಶನಿ | ಅಂಬೇಡ್ಕರ್ ಜಯಂತಿ |
| | 24 | ಮಂಗಳ | ಬಸವೇಶ್ವರ ಜಯಂತಿ |
| ಮೇ | 01 | ಮಂಗಳ | ಕಾರ್ಮಿಕರ ದಿನಾಚರಣೆ |
| ಆಗಸ್ಟ್ | 15 | ಬುಧ | ಸ್ವಾತಂತ್ರ್ಯ ದಿನಾಚರಣೆ |
| | 20 | ಸೋಮ | ಖುತ್ಬ-ಎ-ರಂಜಾನ್ |
| ಸೆಪ್ಟೆಂಬರ್ | 19 | ಬುಧ | ವರಸಿದ್ಧಿ ವಿನಾಯಕ ವ್ರತ |
| ಅಕ್ಟೋಬರ್ | 02 | ಮಂಗಳ | ಗಾಂಧಿ-ಲಾಲ್‌ಬಹದ್ದೂರ್ ಶಾಸ್ತ್ರಿ ಜಯಂತಿ |
| | 15 | ಸೋಮ | ಮಹಾಲಯಾಮಾವಾಸ್ಯೆ |
| | 23 | ಮಂಗಳ | ಮಹಾನವಮಿ-ಆಯುಧಪೂಜೆ |
| | 24 | ಬುಧ | ವಿಜಯದಶಮಿ |
| | 26 | ಶುಕ್ರ | ಬಕ್ರೀದ್ |
| | 29 | ಸೋಮ | ವಾಲ್ಮೀಕಿ ಜಯಂತಿ |
| ನವೆಂಬರ್ | 01 | ಗುರು | ಕನ್ನಡ ರಾಜ್ಯೋತ್ಸವ |
| | 12 | ಸೋಮ | ನರಕಚತುರ್ದಶಿ |
| | 14 | ಬುಧ | ಬಲಿಪಾಡ್ಯಮಿ, ದೀಪಾವಳಿ ಹಬ್ಬ |
| | 25 | ಭಾನು | ಮೊಹರಂ ಕಡೇದಿನ |
| ಡಿಸೆಂಬರ್ | 01 | ಶನಿ | ಕನಕದಾಸ ಜಯಂತಿ |
| | 25 | ಮಂಗಳ | ಕ್ರಿಸ್‌ಮಸ್ ದಿನಾಚರಣೆ |

## ಜೂನ್ 2012

| ಭಾ | ಸೋ | ಮಂ | ಬುಧ | ಗುರು | ಶುಕ್ರ | ಶನಿ |
|---|---|---|---|---|---|---|
| | | | | | 1 | 2 |
| 3 | 4 | 5 | 6 | 7 | 8 | 9 |
| 10 | 11 | 12 | 13 | 14 | 15 | 16 |
| 17 | 18 | 19 | 20 | 21 | 22 | 23 |
| 24 | 25 | 26 | 27 | 28 | 29 | 30 |

## ಜುಲೈ 2012

| ಭಾ | ಸೋ | ಮಂ | ಬುಧ | ಗುರು | ಶುಕ್ರ | ಶನಿ |
|---|---|---|---|---|---|---|
| 1 | 2 | 3 | 4 | 5 | 6 | 7 |
| 8 | 9 | 10 | 11 | 12 | 13 | 14 |
| 15 | 16 | 17 | 18 | 19 | 20 | 21 |
| 22 | 23 | 24 | 25 | 26 | 27 | 28 |
| 29 | 30 | 31 | | | | |

## ಆಗಸ್ಟ್ 2012

| ಭಾ | ಸೋ | ಮಂ | ಬುಧ | ಗುರು | ಶುಕ್ರ | ಶನಿ |
|---|---|---|---|---|---|---|
| | | | 1 | 2 | 3 | 4 |
| 5 | 6 | 7 | 8 | 9 | 10 | 11 |
| 12 | 13 | 14 | 15 | 16 | 17 | 18 |
| 19 | 20 | 21 | 22 | 23 | 24 | 25 |
| 26 | 27 | 28 | 29 | 30 | 31 | |

## ಸೆಪ್ಟೆಂಬರ್ 2012

| ಭಾ | ಸೋ | ಮಂ | ಬುಧ | ಗುರು | ಶುಕ್ರ | ಶನಿ |
|---|---|---|---|---|---|---|
| 30 | | | | | | 1 |
| 2 | 3 | 4 | 5 | 6 | 7 | 8 |
| 9 | 10 | 11 | 12 | 13 | 14 | 15 |
| 16 | 17 | 18 | 19 | 20 | 21 | 22 |
| 23 | 24 | 25 | 26 | 27 | 28 | 29 |

## ಅಕ್ಟೋಬರ್ 2012

| ಭಾ | ಸೋ | ಮಂ | ಬುಧ | ಗುರು | ಶುಕ್ರ | ಶನಿ |
|---|---|---|---|---|---|---|
| | 1 | 2 | 3 | 4 | 5 | 6 |
| 7 | 8 | 9 | 10 | 11 | 12 | 13 |
| 14 | 15 | 16 | 17 | 18 | 19 | 20 |
| 21 | 22 | 23 | 24 | 25 | 26 | 27 |
| 28 | 29 | 30 | 31 | | | |

## ನವೆಂಬರ್ 2012

| ಭಾ | ಸೋ | ಮಂ | ಬುಧ | ಗುರು | ಶುಕ್ರ | ಶನಿ |
|---|---|---|---|---|---|---|
| | | | | 1 | 2 | 3 |
| 4 | 5 | 6 | 7 | 8 | 9 | 10 |
| 11 | 12 | 13 | 14 | 15 | 16 | 17 |
| 18 | 19 | 20 | 21 | 22 | 23 | 24 |
| 25 | 26 | 27 | 28 | 29 | 30 | |

## ಡಿಸೆಂಬರ್ 2012

| ಭಾ | ಸೋ | ಮಂ | ಬುಧ | ಗುರು | ಶುಕ್ರ | ಶನಿ |
|---|---|---|---|---|---|---|
| 30 | 31 | | | | | 1 |
| 2 | 3 | 4 | 5 | 6 | 7 | 8 |
| 9 | 10 | 11 | 12 | 13 | 14 | 15 |
| 16 | 17 | 18 | 19 | 20 | 21 | 22 |
| 23 | 24 | 25 | 26 | 27 | 28 | 29 |

Cover printed at : Geetanjali Graphics, B-71, KSSIDC Indl. Area, 6th Block, Rajajinagar, Bangalore 10. Ph : 23484232